605

ಶ್ರೀಮನ್ನಿಗಮಾಂತಮಹಾದೇಶಿಕಸಪ್ತಮಶತಮಾನೋತ್ಸವ
ಪ್ರಕಟಣೆ

# ಅಭಯಪ್ರದಾನಸಾರ

ಮೂಲ ಮತ್ತು ತಾತ್ಪರ್ಯಸಹಿತ




ಅನುವಾದ :

ಡಿ. ಕೃಷ್ಣಯ್ಯಂಗಾರ್


★


ಪ್ರಕಟಣೆ :

ಶ್ರೀ ವೆಂಕಟೇಶ ಸಭಾ (ರಿ), ಮೈಸೂರು-4

1968

ಪ್ರಥಮ ಮುದ್ರಣ

ಬೆಲೆ : ರೂ. 1-50

ಮುದ್ರಕರು :

**ಪಂಡಿತ್ ಕೆ. ಎಸ್. ವರದರಾಜಯ್ಯಂಗಾರ್**

ಶ್ರೀಕಾಂತ ಪವರ್ ಪ್ರೆಸ್,

561, ರಾಮಚಂದ್ರ ಅಗ್ರಹಾರ, ಮೈಸೂರು – 4

# ಅಭಯ ಪ್ರದಾನಸಾರ

## ಪೀಠಿಕೆ

ಏಳುಭಯ ಬೇಡೆಲೆ ವಿಭೀಷಣ
ಕೇಳು ಲಕ್ಷ್ಮಣನಂತೆ ನಿನ್ನನು
ಕಾಂಬೆ ದಶರಥನಾಣೆ ತೊರೆ ಚಿಂತೆಯನು ನೀನೆಂದು |
ಮೌಳಿಯನು ಮೇಲೆತ್ತಿ ಕರುಣೆಯ
ತೋರುತಲಿ ಶರಣಾಗತಾರ್ತನ
ತೋಳಿನಲಿ ಬಿಗಿದಪ್ಪಿದನು ಬಳಿಕಾ ವಿಭೀಷಣನ ||

ಈ ಪದ್ಯವು ಅಭಯಪ್ರದಾನಸಾರದ ಕಥಾವಸ್ತುವನ್ನು ತಿಳಿಸುತ್ತದೆ. ಇದು ಶ್ರೀಮದ್ರಾಮಾಯಣದಲ್ಲಿ ಬರುವ ಬಹು ಪ್ರಶಸ್ತವಾದ ಕಥಾಭಾಗ. ಶ್ರೀಮದ್ರಾಮಾಯಣದ ಹೆಸರನ್ನು ,ಕೇಳದವರು ಅತಿ ವಿರಳ. ಆದರೂ ಅದರ ರಹಸ್ಯಾರ್ಥವನ್ನು ತಿಳಿದವರು ಬಹಳ ಜನರಿಲ್ಲ. ಭಾರತೀಯ ಜೀವನದಲ್ಲಿ ರಾಮಾಯಣವು ಹಾಸುಹೊಕ್ಕಿನಂತೆ ಹೊಂದಿಕೊಂಡಿದೆ. ಅದರ ತತ್ವವನ್ನೋ, ಕಥೆಯನ್ನೋ, ಕಾವ್ಯಲಕ್ಷಣವನ್ನೋ, ಶಬ್ದ ವೈಚಿತ್ರ್ಯವನ್ನೋ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವರ್ಣಿಸಿ, ಮನಸ್ಸನ್ನು ಆಕರ್ಷಿಸುವಂತಹ ಸಾಹಿತ್ಯ ಸೃಷ್ಟಿಮಾಡಿದ್ದಾರೆ.

ಶ್ರೀಮದ್ರಾಮಾಯಣವು ಶ್ರೀ ರಾಮನ ಚರಿತ್ರೆ. ಇದು ಮೊದಲು ಗೀತ ರೂಪದಲ್ಲಿ ಪ್ರಚಾರಕ್ಕೆ ಬಂದಿತು. ವೀಣಾವಾದನ ಸಮೇತ ಮಧುರ ವಾಗಿ ಗಾನಮಾಡಲ್ಪಟ್ಟಿತು. ಇದನ್ನು ಕೇಳಿದವರೆಲ್ಲ ಅಮಿತಾನಂದ ಹೊಂದಿದರು. ಅನಂತರ ಇದು ಪುಣ್ಯ ಕಥೆಯಾಗಿ, ಆದರ್ಶ ಕಥೆಯಾಗಿ ಉಳಿಯಿತು. ಕಥಾನಾಯಕನು, ಪುಣ್ಯಾತ್ಮನೂ, ಧರ್ಮಾತ್ಮನೂ, ಪವಿತ್ರಾತ್ಮನೂ ಆಗಿದ್ದುದರಿಂದ, ಅವನು ಪರಮಾತ್ಮನ ಅವತಾರವೆಂದು ಪರಿಗಣಿಸಲ್ಪಟ್ಟನು. ಇಂತಹ ಮಹಾ ಪುರುಷನ ದಿವ್ಯ ಚರಿತ್ರೆಯಾದ ಶ್ರೀಮದ್ರಾಮಾಯಣವು ಕಾಲಕ್ರಮದಲ್ಲಿ, ಪವಿತ್ರ ಗ್ರಂಥವೂ, ನಿತ್ಯ ಪಾರಾಯಣಕ್ಕೆ ಅರ್ಹವಾದ ಗ್ರಂಥವೂ ಆಗಿ ಪ್ರಚಾರದಲ್ಲಿ ಬಂದಿತು.

ಕೊನೆಗೆ ಇದು ರಾಷ್ಟ್ರದ ಸರ್ವೋತ್ತಮ ಇತಿಹಾಸವಾದುದಲ್ಲದೆ, ಇಡೀ ವಿಶ್ವದ ಆದರ್ಶ ಕಾವ್ಯವಾಗಿದೆ.

ಶ್ರೀಮದ್ರಾಮಾಯಣವು ಭಾರತೀಯ ಸಂಸ್ಕೃತಿಯ ಪ್ರತೀಕ. ಸಂಸ್ಕೃತಿಯ ಮುಖ್ಯ ಲಕ್ಷಣಗಳನ್ನು ರಾಮಾಯಣದಲ್ಲಿ ವಿವರಿಸಿರುವಂತೆ, ಇನ್ನಾವ ಗ್ರಂಥದಲ್ಲಿಯೂ ಪ್ರತಿಪಾದಿಸಿಲ್ಲ. ಮಾನವನಲ್ಲಿ ಸದ್ವೃತ್ತಿ, ಧರ್ಮ, ನ್ಯಾಯಪರತೆ, ದೈವಭಕ್ತಿ, ಕರ್ಮಶ್ರದ್ಧೆ–ಇತ್ಯಾದಿ ಸಹಜ ಸ್ವಭಾವಗಳು ನೆಲಸಿದರೆ, ವ್ಯಕ್ತಪಟ್ಟರೆ, ಅಂತಹವನಿಗೆ ಎಂತಹ ಕಷ್ಟ ಬಂದರೂ ಸುಲಭವಾಗಿ ನಿವಾರಣೆಯಾಗುವುದು. ಈ ಗುಣಗಳಿಂದ ಅವನು ಕ್ರಮಕ್ರಮವಾಗಿ ಧರ್ಮಾನುಷ್ಠಾನಮಾಡಿ, ಆದರ್ಶ ಜೀವನವನ್ನು ನಡೆಸಬಹುದೆಂಬ ತತ್ವವನ್ನು ರಾಮಾಯಣವು ಸಾರುತ್ತದೆ. ಇಷ್ಟೇ ಅಲ್ಲದೆ 'ಮಾತೃದೇವೋ ಭವ' "ಪಿತೃದೇವೋ ಭವ" "ಅತಿಥಿ ದೇವೋ ಭವ" "ಸತ್ಯಂ ವದ" "ಧರ್ಮಂ ಚರ" ಇತ್ಯಾದಿ ವೇದಪ್ರತಿಪಾದಿತವಾದ, ಸರ್ವೋತ್ತಮವಾದ, ಸಕಲ ಮಾನವರಿಗೂ ಮಾರ್ಗದರ್ಶಕವಾದ ಉಕ್ತಿಗಳಿಗನುಸಾರವಾಗಿ, ಶ್ರೀರಾಮನು ವರ್ತಿಸಿ, ಧರ್ಮಾಚರಣೆಮಾಡಿ ತೋರಿಸಿ, ಎಲ್ಲ ಕಾಲಕ್ಕೂ, ಎಲ್ಲ ಜನರಿಗೂ, ಎಲ್ಲ ದೇಶಕ್ಕೂ ಆದರ್ಶಪ್ರಾಯನಾಗಿದ್ದಾನೆ. ಆದುದರಿಂದಲೇ ರಾಮಾಯಣವು ವೇದಕ್ಕೆ ಸಮಾನ, ಎಂದು ಆಚಾರ್ಯರು ತಿಳಿಸಿದ್ದಾರೆ. ವಿಶ್ವಮಾನವರ ಉದ್ಧಾರಕ್ಕೆ ವಿಶ್ವಕಾವ್ಯವಾದ ರಾಮಾಯಣಕ್ಕಿಂತ ಉತ್ತಮ ಸಾಧನ ಇನ್ನೊಂದಿಲ್ಲ ಎಂದು ವಿಶ್ವಕವಿ ರವೀಂದ್ರನಾಥ ಠಾಕೂರರೂ ಸೂಚಿಸಿದ್ದಾರೆ.

ಆದಿಕವಿ ವಾಲ್ಮೀಕಿ ಮಹರ್ಷಿಯು ಶ್ರೀರಾಮನನ್ನು "ರಾಮೋ ವಿಗ್ರಹವಾನ್ ಧರ್ಮಃ" "ಸತ್ಯಧರ್ಮ ಪರಾಕ್ರಮಃ" ಇತ್ಯಾದಿಯಾಗಿ ವರ್ಣಿಸಿದ್ದಾರೆ. ಶ್ರೀರಾಮನ ಸತ್ಯಸಂಕಲ್ಪ, ಪಿತೃವಾಕ್ಯ ಪರಿಪಾಲನೆ, ಸೀತಾದೇವಿಯ ಪತಿನಿಷ್ಠೆ, ಭರತಲಕ್ಷ್ಮಣರ ಸೋದರ ವಾತ್ಸಲ್ಯ, ಶಬರಿ ಗುಹ ಇವರುಗಳ ಆತ್ಮನಿವೇದನ, ಆಂಜನೇಯನ ಅಪ್ರತಿಮ ಸ್ವಾಮಿಭಕ್ತಿ, ವಿಭೀಷಣನ ಶರಣಾಗತಿ—ಇವೆಲ್ಲವೂ ಉತ್ತಮ ಸಂಸ್ಕೃತಿಯ ಮುಖ್ಯ ಲಕ್ಷಣಗಳು. ಇವು ಮಾನವನನ್ನು ಧರ್ಮಾನುಸಂಧಾನದಲ್ಲಿ ಸದಾ ನಿರತನಾಗುವಂತೆ ಸಹಾಯ ಮಾಡುತ್ತವೆ. "ಸರ್ವತ್ರ ಸಮದರ್ಶನಃ" ಎಂಬ ನೀತಿಯನ್ನು ಸಾರುತ್ತವೆ.

ಶ್ರೀಮದ್ರಾಮಾಯಣವು ಶರಣಾಗತಿ ಸಿದ್ಧಾಂತದ ಮಹಾ ಗ್ರಂಥ ಎಂದು ಪ್ರಸಿದ್ಧಿ ಹೊಂದಿದೆ. ಶರಣಾಗತಿಗೆ ಪ್ರಪತ್ತಿ ಅಥವ ನ್ಯಾಸವಿದ್ಯೆ ಎಂಬ ಹೆಸರೂ ರೂಢಿಯಲ್ಲಿ ಬಂದಿದೆ. ಪ್ರಪತ್ತಿಯು ಸರ್ವರಿಗೂ ಉಪಾದೇಯವಾದ ವಿಶ್ವಧರ್ಮ. ಈ ಪ್ರಪತ್ತಿಧರ್ಮವು ರಾಮಾಯಣ ದಲ್ಲಿ ನಿರೂಪಿಸಲ್ಪಟ್ಟಿರುವಂತೆ, ಜಗತ್ತಿನ ಇನ್ಯಾವ ಗ್ರಂಥದಲ್ಲಿಯೂ ನಿರೂಪಿಸಲ್ಪಟ್ಟಿಲ್ಲ. ಇದರ ಪ್ರತಿಯೊಂದು ಕಾಂಡದಲ್ಲಿಯೂ, ಪ್ರಪತ್ತಿ ವಿದ್ಯೆ ಬಹು ಸ್ವಾರಸ್ಯವಾಗಿ ಉಪಪಾದಿತವಾಗಿದೆ. ಬಾಲಕಾಂಡದಲ್ಲಿ ದೇವತೆಗಳ ಶರಣಾಗತಿ, ಅಯೋಧ್ಯಾಕಾಂಡದಲ್ಲಿ ದಂಡಕಾರಣ್ಯದ ಋಷಿಗಳ ಶರಣಾಗತಿ, ಕಿಷ್ಕಿಂಧಾ ಕಾಂಡದಲ್ಲಿ ಸುಗ್ರೀವನ ಶರಣಾಗತಿ, ಸುಂದರಕಾಂಡದಲ್ಲಿ ತ್ರಿಜಟೆಯ ಶರಣಾಗತಿ, ಯುದ್ಧಕಾಂಡದಲ್ಲಿ ವಿಭೀಷಣನ ಶರಣಾಗತಿ-ಇವುಗಳು ಪ್ರಪತ್ತಿ ವಿದ್ಯೆಯ ಮಹಿಮೆಯನ್ನು ಚೆನ್ನಾಗಿ ವಿಶದಪಡಿಸುವ ಪ್ರಮಾಣಗಳು. ಈ ಕಾರಣದಿಂದ ರಾಮಾ ಯಣವು ಶರಣಾಗತಿ ಸಿದ್ಧಾಂತ ಎಂದೂ ಜಗತ್ತಿನಲ್ಲಿ ಪ್ರಸಿದ್ಧಿ ಹೊಂದಿದೆ.

ಶ್ರೀ ನಿಗಮಾಂತ ಮಹಾದೇಶಿಕರು, ರಾಮಾಯಣದ ವಿಭೀಷಣ ಶರಣಾಗತಿಯ ಕಥಾ ಸಂದರ್ಭವನ್ನು ಆರಿಸಿಕೊಂಡು "ಅಭಯ ಪ್ರದಾನ ಸಾರ" ಎಂಬ ಮಣಿಪ್ರವಾಳ ರಹಸ್ಯ ಗ್ರಂಥವನ್ನು ರಚಿಸಿದರು. ಶರಣಾಗತಿ ವಿದ್ಯೆಯ ಮಹಿಮೆಯನ್ನು ಬಹು ಸ್ವಾರಸ್ಯವಾಗಿ, ವಿವರಿಸಿದ್ದಾರೆ. ಪ್ರಪತ್ತಿ ಧರ್ಮದ ರೂಪುರೇಖೆಗಳನ್ನೂ, ಮಹಿಮೆಯನ್ನೂ, ಅಗತ್ಯವನ್ನೂ, ಅನೇಕ ಪ್ರಮಾಣಗಳಿಂದ ಸಮರ್ಥಿಸಿ, ಬಹು ಅದ್ಭುತ ರೀತಿಯಲ್ಲಿ ಆಚಾರ್ಯರು ವಿಶದೀಕರಿಸಿದ್ದಾರೆ ಅಭಯಪ್ರದಾನಸಾರವು ಸರ್ವಾದರಣೀಯ ಗ್ರಂಥ ವಾಗಿದೆ.

ಧರ್ಮಾತ್ಮನಾದ ವಿಭೀಷಣನು, ಅಧರ್ಮ ಪ್ರವರ್ತಕನಾದ ರಾವಣನ ಸಹವಾಸವನ್ನು ಬಿಟ್ಟು, ಎಲ್ಲಿ ಧರ್ಮವಿರುವುದೋ ಅಲ್ಲಿಗೆ, ಹೋಗಬೇಕೆಂದು ನಿಶ್ಚಯ ಮಾಡಿದನು. ತನ್ನ ಅಣ್ಣನಾದ ರಾವಣನ ಪಾಪಕಾರ್ಯದಲ್ಲಿ ತಾನು ಖಂಡಿತ ಭಾಗಿಯಾಗುವುದಿಲ್ಲವೆಂದು ತಿಳಿಸಿ, ನಾಲ್ವರು ಮಂತ್ರಿ ಗಳೊಡನೆ ಶ್ರೀರಾಮನಿರುವ ಸ್ಥಳಕ್ಕೆ ಹಾರಿ ಬಂದು ಆಕಾಶದಲ್ಲಿ ನಿಂತು "ಎಲೈ ! ವಾನರವೀರರೇ ! ನಾನು ವಿಭೀಷಣನು, ಲಂಕೆಯನ್ನು ಬಿಟ್ಟು

ಬಂದಿದ್ದೇನೆ. ಸಮಸ್ತ ಐಶ್ವರ್ಯವನ್ನೂ, ಸ್ನೇಹಿತರನ್ನೂ ಬಂಧುಬಳಗ ವನ್ನೂ ಎಲ್ಲವನ್ನು ತ್ಯಜಿಸಿ ಶ್ರೀರಾಮನಲ್ಲಿ ಶರಣಾಗತನಾಗಲು ಬಂದಿದ್ದೇನೆ. ದಯಮಾಡಿ, ಈ ವಿಷಯವನ್ನು ಅವನಲ್ಲಿ ಜಾಗ್ರತೆ ತಿಳಿಸಿ" ಎಂದು ವಿನಯಪೂರ್ವಕವಾಗಿ ಬೇಡುವನು. ಶ್ರೀರಾಮನ ಸಂಬಂಧವೇ ತನಗೆ ಸರ್ವ ಶ್ರೇಯಸ್ಕರವೆಂದು, ಶ್ರೀರಾಮ ಪರಿವಾರಕ್ಕೆ ವಿಭೀಷಣನು ಹೀಗೆ ತಿಳಿಸು ವನು. "ಅಯ್ಯಾ ! ಮಹಾತ್ಮರೇ ! ಶ್ರೀರಾಮನು ಸರ್ವಲೋಕಶರಣ್ಯನು ರಘುಕುಲೋತ್ತಮನು ! ಮಹಾತ್ಮನು ! ಅವನನ್ನು ಶರಣುಹೋಗಲು ವಿಭೀಷಣನಾದ ನಾನು ಕಾದುಕೊಂಡಿದ್ದೇನೆ. ಇದನ್ನು ನನ್ನ ಪರವಾಗಿ ನೀವುಗಳು ಶ್ರೀರಾಮನಿಗೆ ಜಾಗ್ರತೆ ತಿಳಿಸಿ. ಅಯ್ಯಾ ! ಶ್ರೀರಾಮನು ತಾನಾಗಿಯೇ ಶರಣಾಗತನಾದ ನನ್ನನ್ನು ಅಂಗೀಕರಿಸುವುದಕ್ಕೆ ಮುಂಚೆ ನೀವು ಪ್ರಾರ್ಥಿಸಿದರೆ, ನಿಮಗೆ ಮಿತ್ರಕಾರ್ಯದ ಕೀರ್ತಿ ಬರುವುದು. ಒಂದು ಪಕ್ಷ ನೀವು ನಿಧಾನ ಮಾಡಿದರೆ, ನಾನೇ ನೇರವಾಗಿ ಅವನಲ್ಲಿ ಮೊರೆ ಇಡ ಬೇಕಾಗುವುದು. ಆಗ ನಿಮ್ಮ ಯಶಸ್ಸಿಗೆ ಕುಂದಲ್ಲವೇ ? ನಾನು ರಾವಣ ನಂತೆ ಪ್ರತಿಕೂಲನಲ್ಲ. ಶರಣಾಗತನಾಗಿರಬೇಕೆಂದು ನನ್ನಲ್ಲಿ ಹುಟ್ಟಿರುವ ಆನುಕೂಲ್ಯವು ಚಂಚಲವಾಗುವುದಕ್ಕೆ ಮುಂಚೆ, ಶ್ರೀರಾಮನಲ್ಲಿ ಇದನ್ನು ವಿಜ್ಞಾಪಿಸಿ. ನಾನು ಒಂದು ಪಕ್ಷ ಲಂಕೆಯಲ್ಲಿದ್ದುಕೊಂಡೇ, ಶರಣಾಗತ ನಾಗಿದ್ದರೆ,ಅಲ್ಲಿಗೇ ಬಂದು ಶ್ರೀರಾಮನು ರಕ್ಷಿಸಬೇಕಾಗಿತ್ತಲ್ಲವೇ? ಅಂತಹ ಕಷ್ಟವನ್ನು ಅವನಿಗೆ ಕೊಡದೆ, ನಾನೇ ಇಲ್ಲಿಗೆ ಬಂದು ಬೇಡುತ್ತಿದ್ದೇನೆ. ಇಡೀ ಲೋಕವನ್ನೇ ರಕ್ಷಿಸುತ್ತಿರುವ ಶ್ರೀರಾಮನಿಗೆ, ನಾನೊಬ್ಬ ಬಾರ ವಾಗುವೆನೇ ? ಇಲ್ಲಿ, ನಾನು ಕಾದುಕೊಂಡಿರುವ ವಿಷಯವನ್ನು ಶ್ರೀರಾಮ ನಿಗೆ ಜಾಗ್ರತೆ ತಿಳಿಸಿ" ಎಂದು ವಿಭೀಷಣನು ಬೇಡಿದನು.

ಈ ಮಾತುಗಳನ್ನು ಕೇಳಿ, ಸುಗ್ರೀವನು ವಿಭೀಷಣನು ಶತ್ರುಪಕ್ಷ ದವನು, ಏತಕ್ಕಾಗಿ ಬಂದಿರುವನೋ ತಿಳಿಯದು. ರಾಕ್ಷಸರನ್ನು ನಂಬ ಬಾರದು. ರಾವಣನ ಗೂಢಚಾರನಾಗಿ ಬಂದಿದ್ದರೂ ಬಂದಿರಬಹುದು. ಅವನು ವಧಾರ್ಹ, ಎಂದು ಹೇಳುವನು. ಉಳಿದ ವಾನರ ವೀರರೂ ತಮ್ಮ ತಮ್ಮ ಅಭಿಪ್ರಾಯವನ್ನು ವಿರೋಧವಾಗಿಯೇ ವ್ಯಕ್ತಪಡಿಸುವರು. ಆದರೆ ಆಂಜನೇಯನು ಮಾತ್ರ ಮೃದುವಾದ, ಇಂಪಾದ, ಅರ್ಥಯುತವಾದ

ಮಾತುಗಳಿಂದ ಹೀಗೆ ಹೇಳುವನು "ಎಲೈ, ದಶರಥ ಕುಮಾರನಾದ ಶ್ರೀ ರಾಮನೇ! ನೀನು ಮಹಾ ಚತುರನು. ಮಹಾ ಕುಶಲನು. ಎಲ್ಲವನ್ನು ತಿಳಿದವನು. ಬೃಹಸ್ಪತಿಯನ್ನು ಮೀರಿಸಿದ್ದೀಯೇ ಬುದ್ಧಿಯಲ್ಲಿ. ನಮ್ಮಲ್ಲಿ ಗೌರವ ತೋರಿಸುವುದಕ್ಕಾಗಿ ಮಾತ್ರ ನೀನು ನಮ್ಮ ಸಲಹೆ ಕೇಳುತ್ತಿದ್ದೀಯೆ ಅಷ್ಟೇ. ಈ ವಾನರವೀರರು ಒಬ್ಬೊಬ್ಬರು ಒಂದೊಂದು ರೀತಿ ಸಲಹೆ ಇತ್ತಿದ್ದಾರೆ. ವಿಭೀಷಣನನ್ನು ಪರೀಕ್ಷಿಸಿ ಅಂಗೀಕರಿಸುವುದು ಯುಕ್ತವಲ್ಲ. ಅವನು ಬಂದಿರುವ ದೇಶ ಕಾಲಗಳೆರಡೂ ಸರಿಯಲ್ಲ ಎಂದು ಹೇಳುವುದೂ ಯುಕ್ತವಲ್ಲ. ವಿಭೀಷಣನು ಮಹಾತ್ಮ. ಅನಾಯಾಸವಾಗಿ ದೊರಕಿದ ಮಿತ್ರ. ಅವನ ಮಾತುಗಳಿಂದಲೇ ಅವನು ಕಪಟಿಯಲ್ಲ ಎಂದು ನಂಬ ಬಹುದು. ಅವನು ದೋಷಿಯಾಗಿದ್ದರೆ,ಇಷ್ಟು ಧೈರ್ಯವಾಗಿ, ನಿರ್ಭಯವಾಗಿ ಬಂದು ನಿಮ್ಮ ಮುಂದೆ ನಿಲ್ಲಬಲ್ಲನೇ? ರಾಜ್ಯಭ್ರಷ್ಟನಾಗಿ ಬಂದಿರುವ ವಿಭೀಷಣನನ್ನು ನೀನು ಅಗತ್ಯವಾಗಿ ಸ್ವೀಕರಿಸಬಹುದು. ನಿನ್ನ ಮಹಾತ್ಮೆಯನ್ನು ತಿಳಿದೇ ಅವನು ಶರಣಾಗತನಾಗಲು ಬಂದಿದ್ದಾನೆ" ಎಂದನು.

ಆಂಜನೇಯನ ಮಾತುಗಳನ್ನು ಕೇಳಿ ಶ್ರೀರಾಮನು ಅತ್ಯಂತ ಹರ್ಷಗೊಂಡನು. ವಾನರ ವೀರರನ್ನು ಕುರಿತು ಹೀಗೆ ಹೇಳುವನು. "ಎಲೈ, ವಾನರವೀರರೇ! ನೀವುಗಳೆಲ್ಲರೂ ನಮ್ಮ ಶ್ರೇಯಃಕಾಂಕ್ಷಿಗಳು. ಯಾರು ಬಂದು "ಶರಣು" ಎಂದರೂ ನಾನು ಅವರನ್ನು ಖಂಡಿತ ಬಿಡೆನು. ಮಿತ್ರನಾಗಿ ಬಂದವನನ್ನು ಪರೀಕ್ಷಿಸಬೇಕಾಗಿಯೇ ಇಲ್ಲ. ಇವನಲ್ಲಿ ದೋಷವಿದ್ದರೂ, ಶರಣ್ಯನಾಗಿ ಬಂದಮೇಲೆ ಅವೆಲ್ಲಾ ಮಾಯವಾಗುವುವು. ರಾವಣನಿಗೆ ಹಿತೋಪದೇಶಮಾಡಿ, ಹನುಮಂತನ ವಧವನ್ನು ತಪ್ಪಿಸಿದವನು ಇವನು. ತನ್ನ ಸರ್ವಸ್ವವನ್ನು ಬಿಟ್ಟು ಬಂದವನು. ಅಯ್ಯಾ! ಶೂರರೇ! ಕೇಳಿ? ಪ್ರಾಣಭೂತಳಾದ ಸೀತೆಯನ್ನಾದರೂ, ಅರ್ಧ ದೇಹದಂತಿರುವ ಲಕ್ಷ್ಮಣನನ್ನಾದರೂ ಬಿಟ್ಟೇನು? ಶರಣಾಗತನಾಗಿ ಬಂದವನನ್ನು ಖಂಡಿತ ದೂರಮಾಡಲಾರೆ. ಒಂದು ಪಕ್ಷ ವಿಭೀಷಣನು ದುಷ್ಟನಾಗಿದ್ದರೂ ಸರಿಯೆ ವಂಚಕನಾಗಿದ್ದರೂ ಸರಿಯೆ, "ಶರಣು" ಎಂದು ಯಾವಾಗ ಹೇಳಿದನೋ, ಆಗ ಅವನನ್ನು ಅಂಗೀಕರಿಸಿಯೇ ತೀರಬೇಕು. ಅದು ನನ್ನ ಮತ ಮತ್ತು ವ್ರತ. ಹೇ! ಸುಗ್ರೀವ ಮಹಾರಾಜಾ! ಪೂರ್ವದಲ್ಲಿ ಒಂದು ಪಾರಿವಾಳವು

ತನ್ನ ಸಾಕ್ಷಾತ್ ಶತ್ರುವಾದ ಬೇಡನನ್ನು ಅಲಕ್ಷ್ಯಮಾಡಿತೇ? ಶರಣಾಗತನಾದ ಅವನನ್ನು ರಕ್ಷಿಸಲಿಲ್ಲವೇ? ಅವನು ಶರಣು ಎಂಬ ಮಾತನ್ನು ಹೇಳದಿದ್ದರೂ, ಅವನ ಸ್ಥಿತಿಯನ್ನು ಕಂಡು ರಕ್ಷಿಸಲಿಲ್ಲವೇ? ಅಂತಹ ತಿರ್ಯಗ್ಜಂತುವಿಗಿಂತ ನಾವು ಕಡಿಮೆಯಾಗಬೇಕೇ? ಹೀಗಿರುವಾಗ ವಿಭೀಷಣನು ನಮಗೆ ಸಾಕ್ಷಾತ್ ಶತ್ರುವೇನಲ್ಲ. ಶತ್ರುವಿನ ತಮ್ಮ. ಒಂದು ಪಕ್ಷ ಶತ್ರುವಾದ ರಾವಣನೇ ಬಂದು ಶರಣು ಎಂದರೆ, ನಾವು ಅವನನ್ನು ರಕ್ಷಿಸಲೇಬೇಕಲ್ಲವೇ? ಸುಗ್ರೀವರಾಜಾ! ವ್ಯಾಘ್ರವಾನರ ಸಂವಾದವನ್ನು ನೀನು ಕೇಳಿಲ್ಲವೇ? ಒಂದು ಕಪಿಯು, ಮಹಾಪರಾಧಿಯಾಗಿದ್ದವನನ್ನು ಶರಣು ಎಂದಮೇಲೆ ರಕ್ಷಿಸಲಿಲ್ಲವೇ? ಹೀಗೆ ಪ್ರಾಣಿಗಳೇ, ಶರಣಾಗತ ರಕ್ಷಣೆಯಲ್ಲಿ ಸನ್ಮಾರ್ಗದರ್ಶಕವಾಗಿರುವಾಗ, ರಘುವಂಶದಲ್ಲಿ ಹುಟ್ಟಿದ ನಾವು, ಅವರಿಗಿಂತ ಹಿಂದುಳಿಯಬೇಕೇ? ದಶರಥರಾಜನ ಮಗನಾಗಿ, ವಸಿಷ್ಠ ವಿಶ್ವಾಮಿತ್ರ ಮಹರ್ಷಿಗಳ ಶಿಷ್ಯನಾಗಿ, ಮಹಾ ಯೋಗಿಯಾದ ಜನಕರಾಜನ ಅಳಿಯನಾಗಿ, ಮರೆಹೊಕ್ಕವರನ್ನು ಕೊಂದರೆ, ಅದಕ್ಕಿಂತ ಹೆಚ್ಚಿನ ಲೋಕನಿಂದಿತಕಾರ್ಯ ಇನ್ನೊಂದುಂಟೇ? ವಿಭೀಷಣನಲ್ಲಿ ಏನೇ ದೋಷವಿದ್ದರೂ, ಅದನ್ನು ಲಕ್ಷಿಸದೆ ಅವನನ್ನು ಅಂಗೀಕರಿಸಲೇಬೇಕು. ವಿಭೀಷಣನು ಅಂಜಲಿಬದ್ಧನಾಗಿ ದೈನ್ಯದಿಂದ ಬೇಡುತ್ತಿರುವುದರಿಂದ ಅವನನ್ನು ಅಂಗೀಕರಿಸಬೇಕಾದುದು ಧರ್ಮ. ಎಲೈ! ಕಪಿಶ್ರೇಷ್ಠರೇ! ಯಾರಾದರೂ ಸರಿಯೇ, ನನ್ನಲ್ಲಿ ಬಂದು ಒಂದುಸಲ "ನಾನು ನಿನ್ನ ಶರಣು ಹೊಂದಿದೆನು ಎಂದು" ಯಾಚಿಸಿದರೆ ಸಾಕು. ಅಂತಹವನನ್ನು ರಕ್ಷಿಸುವಂತೆ ಅಭಯ ನೀಡುವೆನು. ಇದೇ ನನ್ನ ಪ್ರತಿಜ್ಞೆ. ಹೇ! ಸುಗ್ರೀವ ರಾಜಾ! ವಿಭೀಷಣನು ಬೇಡಿರುವುದನ್ನು ಮೊದಲು ನೀನೆ ಕೇಳಿದೆ. ಅವನಿಗೆ ಅಭಯ ಕೊಟ್ಟಾಗಿದೆ. ನೀನೇ ಹೋಗಿ ಕರೆದುಕೊಂಡು ಬಾ" ಎಂದು ಶ್ರೀರಾಮನು ಹೇಳಿದನು. ಆಗ ಸುಗ್ರೀವನು ಶ್ರೀರಾಮನ ಮೇಲ್ಮೆಯನ್ನು ಕೊಂಡಾಡಿ, ವಿಭೀಷಣನ ಸ್ನೇಹಕ್ಕೆ ತಾನೂ ಇಷ್ಟಪಟ್ಟು ಅವನನ್ನು ಕರೆದುಕೊಂಡು ಬಂದನು. ಆಗ ಶ್ರೀರಾಮನು ಮುಂದೆ ಬಂದು, ವಿಭೀಷಣನನ್ನು ಆಲಂಗಿಸಿ, ಲಕ್ಷ್ಮಣನಿಂದ ತೀರ್ಥ ತರಿಸಿ, ಅವನಿಗೆ ಲಂಕಾರಾಜ್ಯ ಪಟ್ಟಾಭಿಷೇಕಮಾಡಿದನು. ಇದೇ ಅಭಯಪ್ರದಾನಸಾರದ ಕಥಾ ಸಾರಾಂಶ.

ಇಂತಹ ಶರಣಾಗತಿಯ ಸ್ವರೂಪ ಸ್ವಭಾವಗಳನ್ನು ಶ್ರೀ ನಿಗಮಾಂತ ಮಹಾದೇಶಿಕರು ನ್ಯಾಸತಿಲಕವಲ್ಲಿ ಬಹು ಸುಂದರವಾಗಿ ತಿಳಿಸಿದ್ದಾರೆ.

ಉಕ್ತ್ಯಾ ಧನಂಜಯ ವಿಭೀಷಣ ಲಕ್ಷ್ಯಯಾ ತೇ
ಪ್ರತ್ಯಾಯ್ಯ ಲಕ್ಷ್ಮಣ ಮುನೇ ರ್ಭವತಾ ವಿತೀರ್ಣಂ ।
ಶ್ರುತ್ವಾ ವರಂ ತದನುಬಂಧಮದಾವಲಿಪ್ತೇ
ನಿತ್ಯಂ ಪ್ರಸೀದ ಭಗವನ್ ! ಮಯಿ ರಂಗನಾಥ !॥

"ಹೇ ! ಭಗವನ್ ! ಶ್ರೀರಂಗನಾಥ ಸ್ವಾಮಿಯೇ ! ನೀನು ಒಂದು ಕಾಲದಲ್ಲಿ ಅರ್ಜುನನನ್ನೂ ವಿಭೀಷಣನನ್ನೂ ಉದ್ದೇಶಿಸಿ ಅನುಗ್ರಹಿಸಿದ ಮಾತನ್ನು ಸಾಕ್ಷಿಯಾಗಿ ತೋರಿಸಿ ಅದರಿಂದ ನಂಬಿಕೆಯನ್ನುಂಟುಮಾಡಿ ಶ್ರೀರಾಮಾನುಜಾಚಾರ್ಯರಿಗೆ ಅನುಗ್ರಹಿಸಿ ಕೊಟ್ಟ ವರದ ಪ್ರಕಾರವನ್ನು ಹಿರಿಯರಿಂದ ಕೇಳಿ ತಿಳಿದು ಆ ಮಹಾಚಾರ್ಯರ ಸಂಬಂಧವು ನನಗೂ ಇರುತ್ತದೆ ಎಂಬ ಗರ್ವವನ್ನಿಟ್ಟುಕೊಂಡಿರುವ ದಾಸನಾದ ನನ್ನ ವಿಷಯ ದಲ್ಲಿ ನೀನು ಪ್ರಸನ್ನನಾಗಬೇಕೆಂದು ಬೇಡುವೆನು."

ಇಲ್ಲಿರುವ ರಹಸ್ಯಾರ್ಥವೇನೆಂದರೆ, ಪರಮಾತ್ಮನು ಅರ್ಜುನನಿಗೂ, ವಿಭೀಷಣನಿಗೂ ಎರಡು ಪ್ರತಿಜ್ಞಾವಚನಗಳನ್ನು ಹೇಳಿರುವನು. ಇದನ್ನು ವಿಚಾರಮಾಡುವಾಗ, ಶರಣಾಗತಿಯಲ್ಲಿರುವ ಭಗವಂತನ ಅನುಗ್ರಹವಚನ ತಕ್ಷಣ ಜ್ಞಾಪಕಕ್ಕೆ ಬರುವುದು. "ಮಾತೇಽಭೂದತ್ರ ಸಂಶಯಃ" ಅನೃತಂ ನೋಕ್ತ ಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ, "ರಾಮೋ ದ್ವಿರ್ನಾಭಿ ಭಾಷತೇ" "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ, ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ""ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ, ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಇವೆಲ್ಲವೂ ಶರಣಾಗತಿ ಪರವಾದ ಪರ ಮಾತ್ಮನ ಉಕ್ತಿಗಳು. ಶ್ರೀ ವೇದಾಂತಾಚಾರ್ಯರು, ಶ್ರೀರಾಮಾನುಜಾ ಚಾರ್ಯರ ಪಾದಾರವಿಂದಗಳ ಸಂಬಂಧದಿಂದ ತನಗೆ ಮೋಕ್ಷ ದೊರಕು ವುದೆಂದು ಹೇಗೆ ದೃಢವಾಗಿ ನಂಬಿದ್ದರೋ, ಹಾಗೆಯೇ ಪ್ರತಿಯೊಬ್ಬ ಚೇತನನೂ, ಆಚಾರ್ಯರ ಮೂಲಕ ಶರಣಾಗತಿಮಾಡಿ ಮೋಕ್ಷ ಪಡೆಯ

ಬೇಕೆಂಬುದು ಇಲ್ಲಿಯ ರಹಸ್ಯಾರ್ಥ. ಇಂಥಹ ಅರ್ಥಗಳೆಲ್ಲವೂ, ಅಭಯ ಪ್ರದಾನ ಸಾರದಲ್ಲಿ ವಿಶದೀಕರಿಸಲ್ಪಟ್ಟಿವೆ.

ಅಭಯಪ್ರದಾನಸಾರದ ಅನುವಾದವನ್ನು, ಶ್ರೀಮಾನ್ ಮಹಾರಾಜಾ ಸಂಸ್ಕೃತ ಪಾಠಶಾಲಾ ವಿಶ್ರಾಂತ ಧರ್ಮಶಾಸ್ತ್ರಪ್ರಾಧ್ಯಾಪಕರಾದ ವಿದ್ವಾನ್, ನೀಲತ್ತಹಳ್ಳಿ ವೆಂಕಟನರಸಿಂಹಾಚಾರ್ಯರು, ಪರಿಷ್ಕರಿಸಿ, ಶ್ರಮವಹಿಸಿ ಸರಿ ಪಡಿಸಿ ಕೊಟ್ಟಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಗಣಿತ ಶಾಸ್ತ್ರ ಪ್ರಾಧ್ಯಾಪಕರಾದ ಶ್ರೀಮಾನ್ ಕೆ. ವೆಂಕಟಾಚಲಯ್ಯಂಗಾರ್ಯರು, ಈ ಪುಸ್ತಕದ ಮುದ್ರಣದ ವೆಚ್ಚವನ್ನು ಪೂರ್ತಿಯಾಗಿ ವಹಿಸಿಕೊಂಡು ಐದು ನೂರು ರೂಪಾಯಿಗಳನ್ನು ಕೃಪೆ ಇಟ್ಟು ಉದಾರವಾಗಿ ದಾನಮಾಡಿದ್ದಾರೆ. ಇದರ ಜೊತೆಗೆ, ಈ ಪುಸ್ತಕದ ಮಾರಾಟದಿಂದ ಬರುವ ಹಣವನ್ನು ಶ್ರೀ ವೆಂಕಟೇಶ ಸಭೆಯ ಲೆಕ್ಕಕ್ಕೆ ಜಮಾ ಮಾಡಿ, ಶ್ರೀ ನಿಗಮಾಂತ ಮಹಾ ದೇಶಿಕರ ಮುಂದಿನ ಗ್ರಂಥ ಪ್ರಕಟಣೆಗಾಗಿ ಉಪಯೋಗಿಸಕೊಳ್ಳಬೇಕೆಂದು ಉದಾರ ಸಹಾಯ ನೀಡಿದ್ದಾರೆ. ಮೇಲ್ಕಂಡ ಇಬ್ಬರು ಮಹನೀಯರಿಗೂ ಲೇಖಕನು ತನ್ನ ಕೃತಜ್ಞತಾಪೂರ್ವಕವಾದ ಧನ್ಯವಾದಗಳನ್ನರ್ಪಿಸುವನು. ಇವರಿಗೆ, ಶ್ರೀ ವೇದಾಂತದೇಶಿಕರ ಪರಮಾನುಗ್ರಹವು ಉಂಟಾಗಲೆಂದು ಹಾರೈಸುವನು.

ಶ್ರೀ ನಿಗಮಾಂತ ಮಹಾದೇಶಿಕರ ಸಪ್ತಮ ಶತಮಾನ ಮಹೋತ್ಸವ ವನ್ನು ಕೀಲಕ ಸಂವತ್ಸರ ಆಶ್ವೀಜ ಶುದ್ಧ ಏಕಾದಶಿ ಬುಧವಾರ ತಾ॥ (೨-೧೦-೬೮) ರಂದು ಎಲ್ಲ ಕಡೆಯೂ ಬಹು ವಿಜೃಂಭಣೆಯಿಂದ ಆಚರಿಸ ಲಾಯಿತು. ಅದರ ಅಂಗವಾಗಿ ಅನೇಕ ಸ್ಮರಣ ಸಂಚಿಕೆಗಳು ಪ್ರಕಟ ವಾಗಿವೆ. ಈ ಕಿರು ಹೊತ್ತಿಗೆಯನ್ನು ಮೈಸೂರಿನಲ್ಲಿ ನಡೆದ ಈ ಉತ್ಸವದ ಅಂಗವಾಗಿಪ್ರಕಟಿಸಲಾಗಿದೆ. ಇದರಿಂದ ಆಚಾರ್ಯರ ಅಭಯ ಪ್ರದಾನಸಾರದ ಸೂಕ್ಷ್ಮ ಪರಿಚಯುವನ್ನು ಸಹೃದಯರಿಗೆ ಸಮರ್ಪಿಸುವ ಭಾಗ್ಯ ದೊರಕಿದುದಕ್ಕೆ ಬಹಳ ಸಂತೋಷವಾಗಿದೆ.

ಮೈಸೂರು ಡಿ. ಕೃಷ್ಣಯ್ಯಂಗಾರ್
ತಾ॥ 5-1-1969

॥ ಶ್ರೀಃ ॥



ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ವೇಧಸೇ ರಘುನಾಥಾಯ ಸೀತಾಯಾಃ ಪತಯೇ ನಮಃ ॥

॥ ಶ್ರೀಃ ॥



ರಾಮಾನುಜದಯಾಪಾತ್ರಂ ಜ್ಞಾನವೈರಾಗ್ಯಭೂಷಣಂ ।
ಶ್ರೀಮದ್ವೇಂಕಟನಾಥಾರ್ಯಂ ವಂದೇ ವೇದಾಂತದೇಶಿಕಂ ॥

|| ಶ್ರಿಯೈ ನಮಃ ||

|| ಶ್ರೀ ನಿಗಮಾನ್ತಮಹಾದೇಶಿಕಾಯ ನಮಃ ||

# ಅಭಯಪ್ರದಾನಸಾರಂ

ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ ॥
ರಾಮಾನುಜದಯಾಪಾತ್ರಂ ಜ್ಞಾನವೈರಾಗ್ಯಭೂಷಣಂ ।
ಶ್ರೀಮದ್ವೇಂಕಟನಾಥಾರ್ಯಂ ವಂದೇ ವೇದಾಂತದೇಶಿಕಮ್ ॥

ಶ್ರೀಮದ್ರಾಮಾಯಣವು ವೇದಕ್ಕೆ ಸಮಾನ. ಇದರಲ್ಲಿ ವಿಭೀಷಣ ಶರಣಾಗತಿ ಎಂಬ ಘಟ್ಟವು ಉಪನಿಷತ್ತೆಂದು ಪ್ರಸಿದ್ಧವಾಗಿದೆ. ಈ ಕಥಾ ಸಂದರ್ಭದಲ್ಲಿ ಕವಿತಾರ್ಕಿಕಸಿಂಹರೂ ಸರ್ವತಂತ್ರಸ್ವತಂತ್ರರೂ ಇತ್ಯಾದಿ ಬಿರುದಾಂಕಿತರಾದ, ಶ್ರೀ ನಿಗಮಾಂತಮಹಾದೇಶಿಕರು, ಪರಮಾತ್ಮನ ಉಕ್ತಿ ಪ್ರತ್ಯುಕ್ತಿಗಳು ಅಡಗಿರುವ ವಿಷಯಗಳಿಗೆ ಬಹು ಸ್ವಾರಸ್ಯವಾದ ಮತ್ತು ಉದಾತ್ತವಾದ ಅರ್ಥ ತಿಳಿಸಿದ್ದಾರೆ. ಇಂತಹ ದಿವ್ಯ ಸೂಕ್ತಿಗಳಿಗೆ ಅಭಯ ಪ್ರದಾನಸಾರ ಎಂಬ ಅನ್ವರ್ಥವಾದ ಹೆಸರನ್ನು ಕೊಟ್ಟಿದ್ದಾರೆ.

ಮೊದಲು ಶ್ರೀ ರಾಮಾಯಣ ಮಹಾ ಗ್ರಂಥಕ್ಕೆ ಪ್ರತಿಪಾದ್ಯನಾದ, ಪ್ರಧಾನ ಪುರುಷೋತ್ತಮನಾದ ಶ್ರೀರಾಮನ ವಿಷಯವಾಗಿ ಒಂದು ಮಂಗಳ ಶ್ಲೋಕವನ್ನು ಸೂಚಿಸಿ, ಅವರ ಆರಾಧ್ಯ ದೇವನಾದ ಶ್ರೀರಂಗ ನಾಥ ಸ್ವಾಮಿಯನ್ನು ಕುರಿತು ಮಂಗಳಾಶಾಸನ ಮಾಡಲಾಗಿದೆ. ಗ್ರಂಥವು ನಿರ್ವಿಘ್ನವಾಗಿ ಪೂರ್ಣವಾಗುವುದಕ್ಕೂ, ಶಿಷ್ಯರ ಅಭ್ಯುದಯಕ್ಕೂ, ಈರೀತಿ ಗ್ರಂಥ ರಚಿಸಲಾಗಿದೆ ಎಂದು ತಿಳಿಸಿ, ಅವರೂ ಮುಂದೆ ಹೀಗೆಯೇ ವರ್ತಿಸಿ ಶ್ರೇಯೋಭಾಗಿಗಳಾಗಬೇಕೆಂದು ಆಶಿಸಿ, ಗ್ರಂಥರಚನೆಯನ್ನು ಮುಂದು ವರಿಸಲಾಗಿದೆ.

ಜಯತ್ಯಾಶ್ರಿತಸಂತ್ರಾಸ ಧ್ವಾಂತವಿಧ್ವಂಸನೋದಯಃ ।
ಪ್ರಭಾವಾನ್ಸೀತಯಾ ದೇವ್ಯಾ ಪರಮವ್ಯೋಮಭಾಸ್ಕರಃ ॥ ೧ ॥
ಪ್ರಾಯಃ ಪ್ರಪದನೇ ಪುಂಸಾಂ ಪೌನಃಪುನ್ಯಂ ನಿವಾರಯನ್ ।
ಹಸ್ತಶ್ರೀರಂಗಭರ್ತುರ್ಮಾಮವ್ಯಾದಭಯಮುದ್ರಿತಃ ॥ ೨ ॥

---

ಪ್ರಪನ್ನರಾಗಿ ಪರಮಾತ್ಮನ ಚರಣಾರವಿಂದವನ್ನು ಆಶ್ರಯಿಸಿರುವ ಮಹನೀಯರುಗಳಿಗೆ, ಈ ಸಂಸಾರ ಭಯದಿಂದ ಉಂಟಾದ ಅಜ್ಞಾನಾಂಧಕಾರವನ್ನು ನಾಶಮಾಡುವುದರಲ್ಲಿ ಸಮರ್ಥನಾಗಿಯೂ, "ಅನನ್ಯಾ ಹಿ ಮಯಾ ಸೀತಾ ಭಾಸ್ಕರೇಣ ಪ್ರಭಾ ಯಥಾ" ಸೂರ್ಯನು ತನ್ನ ಪ್ರಭೆಯೊಡನೆ ಹೇಗೆ ಕೂಡಿರುವನೋ, ಹಾಗೆಯೇ ಸೀತಾದೇವಿಯಿಂದ ಕೂಡಿರುವ ಶ್ರೀ ವೈಕುಂಠದಲ್ಲಿ ಸೂರ್ಯನಂತೆ ಪ್ರಕಾಶಿಸುವ, ಶ್ರೀರಾಮಚಂದ್ರನು ಸರ್ವೋತ್ಕೃಷ್ಟನಾಗಿದ್ದಾನೆ.

ಶ್ರೀ ವೈಕುಂಠನಾಥನು ಆಶ್ರಿತರ ಸಂರಕ್ಷಣಾರ್ಥವಾಗಿಯೇ ಲೀಲಾವಿಭೂತಿಯಲ್ಲಿ ಅನೇಕ ಅವತಾರಗಳನ್ನು ತಾಳಿ, ಚೇತನರಿಗುಂಟಾದ ಅಜ್ಞಾನವನ್ನು ನಿವಾರಣೆ ಮಾಡುವನು. ಅವರು ಶರಣಾಗತಿರೂಪವಾದ ಉಪಾಯವನ್ನು ಅನುಷ್ಠಿಸಿ, ತನ್ನ ಸಾಯುಜ್ಯವನ್ನು ಪಡೆದು ಶ್ರೀ ವೈಕುಂಠದಲ್ಲಿ ನಿತ್ಯಕಿಂಕರರಾಗಿರುವಂತೆ ಅನುಗ್ರಹಿಸುವನು.

ಪ್ರಕೃತ ಶ್ರೀ ಮಹಾವಿಷ್ಣುವು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ, ರಾವಣವಧಾರ್ಥವಾಗಿ, ಶ್ರೀರಾಮನ ರೂಪದಿಂದ ಅವತರಿಸಿ, ಸಾಧುಸಂರಕ್ಷಣಕ್ಕೆ ಅನುಕೂಲವಾಗಿ ದುಷ್ಪ್ರಕೃತಿಯಾದ ರಾವಣವಧವನ್ನು ಮಾಡಿದನು. ಇದರಿಂದ ಶ್ರೀರಾಮನು ಸಾಕ್ಷಾತ್ ಅಪ್ರಾಕೃತ ದಿವ್ಯ ಮಂಗಳವಿಶಿಷ್ಟನಾದ ಶ್ರೀಮನ್ನಾರಾಯಣನೇ ಎಂದು ನಿರ್ಧರಿಸಲಾಗಿದೆ. 'ಜಯತಿ' ಎಂದು ಹೇಳಿರುವುದು, ಅಂತಹ ಶ್ರೀರಾಮನಿಗೆ ನಮಸ್ಕಾರ ಎಂಬ ಭಾವನೆ ವ್ಯಕ್ತಪಡಿಸುವುದಕ್ಕಾಗಿ.

ಹಾಗೆಯೇ ಶ್ರೀರಂಗನಾಥನ ವಿಷಯವಾಗಿ ಮಂಗಳಾಶಾಸನ ಮಾಡಲಾಗಿದೆ. ಶ್ರೀರಂಗನಾಥನು ಧರಿಸಿರುವ ಅಭಯ ಮುದ್ರೆಯಿಂದ ಕೂಡಿ

ನಮಸ್ತಸ್ಮೈ ಕಸ್ಮೈಚನ ಭವತು ನಿಷ್ಕಿಂಚನಜನ ಸ್ವಯಂ ರಕ್ಷಾ ದೀಕ್ಷಾಸಮಧಿಕಸಮಿಂಧಾನಯಶಸೇ । ಸುರಾಧೀಶಸ್ಯೈವ ರಕ್ಷಣಕುಪಿತ ಶಾಪಾಯುಧವಧೂ ದೃಷತ್ತಾ ದುರ್ಜಾತ ಪ್ರಶಮನಪದಾಮ್ಭೋಜರಜಸೇ॥

ಶೋಕನ್ತವಿರ್‌ಕ್ಕುಮ್ ಶುರುತಿಪ್ಪೊರುಳೊನ್ರು ಶೊಲ್ಲುಕಿನ್ರೇ
ನಾಕನ್ತನಕ್ಕುಮಿರಾಕ್ಕತರ್‌ಕ್ಕುಮ್ ನಮುಕ್ಕುಂ ಶರಣಾಮ್

---

ರುವ ದಿವ್ಯ ಹಸ್ತವನ್ನು ಹೀಗೆ ವರ್ಣಿಸಲಾಗಿದೆ. ಸಂಸಾರದಲ್ಲಿ ತೊಳಲಿ ಕಷ್ಟಪಡುತ್ತಿರುವ ಚೇತನರುಗಳಿಗೆ, ಜನ್ಮಾಂತರ ಸುಕೃತದಿಂದ ಅವರು ನಡೆಸುವ ಶರಣಾಗತಿ ಎಂಬ ಉಪಾಯಾನುಷ್ಠಾನಕ್ಕೆ ಪುನರಾವೃತ್ತಿ ಇಲ್ಲ ವೆಂಬ ಭಾವವನ್ನು ಇದು (ಈ ಅಭಯವು) ಸೂಚಿಸುವುದು ಇದರಿಂದ ಪ್ರಪತ್ತಿಗೆ ಪುನರಾವೃತ್ತಿ ಇಲ್ಲವೆಂದೂ, ಪ್ರಾಪ್ಯನಾದ ಪರಮಾತ್ಮನ ನಿತ್ಯ ಕೈಂಕರ್ಯ ರೂಪ ಮೋಕ್ಷವು ತಪ್ಪದೆ ದೊರಕುವುದೆಂದೂ ವ್ಯಕ್ತಪಡುವುದು.

ಅಕಿಂಚನರಾದ ಪ್ರಪನ್ನರ ರಕ್ಷಣಾದೀಕ್ಷೆಯನ್ನು ಪರಮಾತ್ಮನು ತಾನಾಗಿಯೇ ವಹಿಸಿರುವನು. ಇದರಿಂದ ಆಶ್ರಿತ ಸಂರಕ್ಷಣವೆಂಬ ಕೀರ್ತಿಯು ಜಗತ್ತಿನಲ್ಲಿ ಬೆಳಗುವಂತೆ ಮಾಡಿರುವನು. ದೇವೇಂದ್ರನು ಕಾಮಾತುರನಾಗಿ ಗೌತಮರ ಪತ್ನಿ ಅಹಲ್ಯೆಯಲ್ಲಿ ಪ್ರವರ್ತಿಸಿ ಶಾಪಾಯುಧರೆಂದು ಪ್ರಸಿದ್ಧ ರಾದ ಗೌತಮರ ಶಾಪರೂಪ ನಿಗ್ರಹಕ್ಕೆ ತಾನು ಪಾತ್ರನಾದುದಲ್ಲದೆ, ಅಹಲ್ಯೆಗೂ ಈ ನಿಮಿತ್ತ ಶಿಲಾರೂಪ ಒದಗುವಂತೆ ಮಾಡಿದನು. ಆದರೆ ಶ್ರೀರಾಮನ ದಿವ್ಯ ಚರಣಾರವಿಂದದ ಧೂಳಿಯಿಂದ, ಅಹಲ್ಯಾ ಶಾಪ ವಿಮೋಚನವಾಯಿತು. ಇಂತಹ ದುರದೃಷ್ಟವಿನಾಶಕವಾದ ದಿವ್ಯ ಚರಣಾರ ವಿಂದವುಳ್ಳ ಶ್ರೀರಾಮನಿಗೆ ನಮಸ್ಕಾರವು.

ದುಃಖವನ್ನು ಹೋಗಲಾಡಿಸುವ ಅಸಮಾನವಾದ ವೇದಗಳ ತಾತ್ಪರ್ಯವು ಇತಿಹಾಸಗಳ ಮೂಲಕ ಉಪಪಾದಿತವಾಗಿವೆ. ಇಂದ್ರನ ಮಗ ನಾದ ಜಯಂತನು, ಅಸಾಧಾರಣ ಕಾಗೆಯ ರೂಪದಲ್ಲಿ ಬಂದು ಪರ ಮಾತ್ಮ ರೂಪ ಶ್ರೀರಾಮನ ಪತ್ನಿ ಸೀತಾದೇವಿಯಲ್ಲಿ ತೀವ್ರತರ ಅಪಚಾರ

ಆಕಂಡರ್ಲ ಮಕನಾಕಿಯವಾವಲಿಪ್ಪೆರಿಯತೋ೯ರ್
ಕಾಕಮ್ಪಿೞ್ತ್ತಿಡಕ್ಕಣ್ಣೞಿವೇಶೇಯ್ದ ಕಾಕುತ್ಥನೇ ॥೧೫॥

ಒರುಕ್ಕಾಲೇ, ಶರಣಾಹವಡೈಕಿನ್ರಾರ್ಕ್ಕುಮ್ ಮುನಕ್ಕಡಿಮೈಯಾಕಿನ್ರೇ ನೆನ್ಗಿನ್ರಾರ್ಕುಮ್, ಅರುಕ್ಕಾತೇಯನೈವರ್ಕ್ಕು ಮನೈವರಾಲುಮ್ ಲಂಜೆ ಲೆನ್ರರುಳ್ ಕೊಡುಪ್ಪನಿತುತಾನೋದುಮ್, ಇರುಕ್ಕಾಲುಮೆೞ್ನ್ಮನಿವರ್ ನಿನ್ನೈ ವಿನಾಲುಮಿವ್ವೈಯರಿವಾರ್ ಶೆಯಲುಡನೆನ್ನಿ ಶೈವಿನಾಲುಮ್, ನೆರುಕ್ಕಾತನೀಳ್ ವಿರತ ಮೇನಕ್ಕೋನೆನ್ರು ನೆರಿಯುಯ್ರೈತ್ತಾರ್ ನಿಲೈಯು ಣರ್ನ್ದುನಿಲೈಪ್ಪೆತ್ತೋಮೇ ॥ ೩ ॥

---

ಪಟ್ಟಾಗ, ಅಂತಹ ಮಹಾಪರಾಧಿಯೂ ಕೂಡ ಬದುಕಿ ಬಾಳಲಿ ಎಂಬ ಮಹಾ ಕೃಪೆಯಿಂದ, ಅವನ ಒಂದು ಕಣ್ಣನ್ನು ಮಾತ್ರ ಶಿಕ್ಷಾರೂಪವಾಗಿ ಶ್ರೀರಾಮನು ನಾಶಪಡಿಸಿ ಅನುಗ್ರಹಿಸಿದನು. ಹಾಗೆಯೇ ಶ್ರೀರಾಮನು ದೇವತೆಗಳಿಗೂ, ರಾಕ್ಷಸರಿಗೂ, ನಮಗೂ ರಕ್ಷಕನಾಗಿಯೂ ಇರುವನು. ಇದರಿಂದ, ಪ್ರಪನ್ನರ ಸಂರಕ್ಷಣೆಯನ್ನು, ಪರಮಾತ್ಮನು ಮತ್ತೊಬ್ಬರಿಗೆ ವಹಿಸದೆ, ತಾನೇ ಸ್ವತಃ ರಕ್ಷಿಸುವನೆಂಬುದು ಸ್ಥಾಪಿತವಾಯಿತು. ಇಂತಹ ರಕ್ಷಣೆಗೆ ಮುಖ್ಯವಾದುದು ಭಗವಂತನ ಪಾದಕಮಲ ಸೇವೆ ಎಂದೂ ಸೂಚಿತವಾಯಿತು.

ಒಂದೇ ಸಲ ಶರಣಾಗತಿಯನ್ನು ಆಚರಿಸುವವರಿಗೂ, ನಿನಗೆ ಕಿಂಕರ ನಾಗಿರುವೆನು ಎನ್ನುವವರಿಗೂ, ಹೆದರಬೇಡ ಕೃಪೆಮಾಡುವೆನು ಎಂಬುದು ಪರಮಾತ್ಮನ ದೀರ್ಘ ವ್ರತಾಚರಣೆ. ಈ ಮಹಾವ್ರತದ ಮಹಿಮೆಯನ್ನು ತೇಜಸ್ವಿಗಳೂ, ಅನುಷ್ಠಾನಪರರೂ ಆದ ಮುನಿಗಳು ಯೋಗಿಗಳು ಬಹು ವಾಗಿ ಪ್ರಶಂಸೆಮಾಡಿ ತಿಳಿಸಿದ್ದಾರೆ. ಇಂತಹ ಶರಣಾಗತಿದೀಕ್ಷೆಯ ಸ್ಥಿತಿ ಯನ್ನು ಶ್ರೀರಾಮನಲ್ಲಿ ನಾವು ಚೆನ್ನಾಗಿ ಪಡೆದೆವು.

## ಪ್ರಬಂಧಾವತಾರಃ

"ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"

ಎನ್ಗಿರಪಡಿಯೇ ಸರ್ವೇಶ್ವರರ್ ಒರು ತ್ರೇತಾಯುಗತ್ತಿಲೇ ಚಕ್ರವರ್ತಿ ತ್ತಿರುಮಹನಾಯವತರಿತ್ತ ಕಾಲತ್ತಿಲೇ ಶ್ರೀವಾಲ್ಮೀಕಿಭಗವರ್ ಬ್ರಹ್ಮಪುತ್ರ ನಾನ ಶ್ರೀನಾರದಭಗವಾನ್ಪಕ್ಕಲಿಲೇ ಇವ್ವವತಾರ ವೃತ್ತಾಂತತ್ತೈ ಸಂಕ್ಷೇಪೇಣಶ್ರವಣಮ್ಪಣ್ಣಿ

"ಮಚ್ಛಂದಾದೇವ ತೇ ಬ್ರಹ್ಮರ್ಪ್ರವೃತ್ತೇಯಂ ಸರಸ್ವತೀ ಎನ್ಗಿರ ಪಡಿಯೆ ಸರಸ್ವತೀವಲ್ಲಭ ನಾನ ಬ್ರಹ್ಮಾವಿನುಡೈಯ ಪ್ರಸಾದತ್ತಾಲೇ ಪ್ರವೃತ್ತಮಾನ ದಿವ್ಯಸಾರಸ್ವ ತತ್ತೈ ಯುಡೈಯನುಮಾಯ್

"ರಹಸ್ಯಂ ಚ ಪ್ರಕಾಶಂ ಚ ಯದ್ವೃತ್ತಂ ತಸ್ಯ ಧೀಮತಃ ।
ರಾಮಸ್ಯ ಸಹ ಸೌಮಿತ್ರೇ ರಾಕ್ಷಸಾನಾಂ ಚ ಸರ್ವಶಃ ॥
ವೈದೇಹ್ಯಾಶ್ಚಾಪಿ ಯದ್ವೃತ್ತಂ ಪ್ರಕಾಶಂ ಯದಿ ವಾ ರಹಃ।
ತಚ್ಚಾಪ್ಯವಿದಿತಂ ಸರ್ವಂ ವಿದಿತಂ ತೇ ಭವಿಷ್ಯತಿ ॥
ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ ॥"

ಎನ್ರು ಬ್ರಹ್ಮಾವಾಲೇ ದತ್ತವರನುಮಾಯ್

---

### 1. ಪ್ರಬಂಧಾವತಾರ

ಶ್ರೀ ವಾಲ್ಮೀಕಿ ಮಹರ್ಷಿಯು ಹೇಳಿರುವ ಶರಣಾಗತಿ ತಾತ್ಪರ್ಯ ನಿರ್ಣಾಯಿಕವಾದ, ಶರಣಾಗತಿ ವೇದವೆಂದು ಪ್ರಸಿದ್ಧವಾದ ಶ್ರೀಮದ್ರಾಮಾಯಣ ದಿವ್ಯ ಗ್ರಂಥವು ಅವತರಿಸುವುದಕ್ಕೆ ಕಾರಣವನ್ನು ನಿರೂಪಿಸಲಾಗಿದೆ. ಶಿಷ್ಟ ರಕ್ಷಣ, ದುಷ್ಟ ಶಿಕ್ಷಣ ಮತ್ತು ವೈದಿಕ ಧರ್ಮೋದ್ಧರಣಗಳಿಗಾಗಿ ಯುಗ ಯುಗದಲ್ಲಿ ಹುಟ್ಟುತ್ತೇನೆ ಎಂಬುದು ಪರಮಾತ್ಮನ ಸಂಕಲ್ಪ. ಇದರಂತೆ ಸರ್ವೇಶ್ವರನು ತ್ರೇತಾಯುಗದಲ್ಲಿ ದಶರಥ ಚಕ್ರವರ್ತಿಯ ಕುಮಾರನಾಗಿ ಅವತರಿಸಿದ ಸಂದರ್ಭದಲ್ಲಿ, ಶ್ರೀ ವಾಲ್ಮೀಕಿ ಮಹರ್ಷಿಯು ಬ್ರಹ್ಮಪುತ್ರರಾದ ನಾರದಮಹರ್ಷಿಯ ಸನ್ನಿಧಾನದಲ್ಲಿ ಶ್ರೀರಾಮನ ಅವತಾರ ವೃತ್ತಾಂತವನ್ನು ಸಂಕ್ಷೇಪವಾಗಿ ಕೇಳಿದನು. ಶ್ರೀ ಸರಸ್ವತೀ ವಲ್ಲಭನಾದ

"ಹಸಿತಂ ಭಾಷಿತಂ ಚೈವ ಗತಿರ್ಯಾ ಯಚ್ಚ ಚೇಷ್ಟಿತಂ ।
ತತ್ಸರ್ವಂ ಧರ್ಮವೀರ್ಯೇಣ ಯಥಾವತ್ಸಂಪ್ರಪಶ್ಯತಿ ॥"
ಎನ್ಗಿರ ಪಡಿಯೇ ಧರ್ಮವೀರ್ಯ ಪ್ರಸೂತಮಾನ ದಿವ್ಯಚಕ್ಷುಸ್ಸಾಲೇ ಇವ್ವವತಾರ ವೃತ್ತಾಂತತ್ತೈ 'ಪಾಣಾವಾಮಲಕಂ ಯಥಾ' ಎನ್ನುಂಪಡಿ ನಿರವಶೇಷಮಾಕ ಸಾಕ್ಷಾತ್ಕರಿತ್ತು

"ದಶೇಂದ್ರಿಯಾನನಂ ಘೋರಂ ಯೋ ಮನೋರಜನೀಚರಂ ।
ವಿವೇಕಶರಜಾಲೇನ ಶಮಂ ನಯತಿ ಯೋಗಿನಾಂ ॥"

ಎನ್ನಿರ ಪಡಿಯೇ ಮುಮುಕ್ಷುವುಕ್ಕು ಪರಮೋಪಕಾರಕಮಾನ ಇವ್ವವತಾರ ರಹಸ್ಯತ್ತೈ, ವೆಳಿಯಿಟ್ಟು ಲೋಕತ್ತೈ, ಉಜ್ಜೀವಿಪ್ಪಿಪ್ಪದಾಹ ತನ್ಕರುಣೈಯಾಲೇ ಪ್ರವೃತ್ತನಾಯ್

"ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬ್ರುಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ ॥"
ಎನ್ಗಿರ ಶಾಸ್ತ್ರಾರ್ಥತ್ತೈ ಅನುಸಂಧಿತ್ತುಕ್ಕೊಂಡು ವೇದೋಪಬ್ರುಂಹಣ

---

ಚತುರ್ಮುಖ ಬ್ರಹ್ಮನಿಂದ ಸಮಸ್ತ ವಾಂಗ್ಮಯ ಅನುಗ್ರಹವನ್ನೂ, ಶ್ರೀ ಸೀತಾರಾಮರ ಸಮಸ್ತ ವ್ಯಾಪಾರ, ಭಾಷಣ, ನಡವಳಿಕೆಯನ್ನೂ ಯಥಾವತ್ತಾಗಿ ವರ್ಣಿಸುವ ಮಹಿಮೆಯನ್ನೂ ಹೊಂದಿದನು. ಹೀಗೆ,ಶ್ರೀವಾಲ್ಮೀಕಿ ಮಹರ್ಷಿಯು ತಮ್ಮ ದಿವ್ಯ ಚಕ್ಷುಸ್ಸಿನಿಂದಲೂ, ತಪೋಮಹಿಮೆಯಿಂದಲೂ ಈ ಅವತಾರ ವೃತ್ತಾಂತವೆಲ್ಲವನ್ನೂ, ಅಂಗೈ ನೆಲ್ಲಿಕಾಯಿಯಂತೆ ಸಾಕ್ಷಾತ್ಕರಿಸಿಕೊಂಡರು. ಮುಮುಕ್ಷುವಿಗೆ ಪರಮೋಪಕಾರಕವಾದ ಈ ಅವತಾರ ರಹಸ್ಯವನ್ನು ಪ್ರಕಾಶಪಡಿಸಿ ಲೋಕೋಜ್ಜೀವನವಾಗುವಂತೆ ಮಾಡಬೇಕೆಂದು ಇಷ್ಟಪಟ್ಟರು. ಇಂತಹ ಮಹಾ ದಯಾಪೂರಿತವಾದ ಪ್ರವರ್ತನೆಗೆ ಕಾರಣವಿದ್ದವು. ವೇದೋಪಬ್ರುಂಹಣವಾದ ಇತಿಹಾಸದ ಪುರಾಣಗಳಿಂದ ವೇದಾರ್ಥವನ್ನು ತಿಳಿದು,ವೇದೋಪಬ್ರುಂಹಣವನ್ನು ಅಪೇಕ್ಷಿಸುವ ಅಲ್ಪಜ್ಞರಿಗೆ ಇದನ್ನು ತಿಳಿಸಬೇಕಾಗಿತ್ತು. ಅಲ್ಪಜ್ಞರಿಂದ ವೇದಗಳಿಗೆ ಉಂಟಾದ ಅಪಾರ್ಥಗಳ ನಿರೂಪಣ ರೂಪವಾದ ಭಯವನ್ನು ನಾಶಪಡಿಸಬೇಕಾಗಿತ್ತು.

ಸಾಪೇಕ್ಷರಾನ ಅಲ್ಪಶ್ರುತರ್ ಪಕ್ಕಲಿರುಕ್ಕತ್ತಾಲುಂ ಅವರ್ಕೈಪ್ಪತ್ತ ವೇದಂಗಳುಕ್ಕುಂಡಾನ ಪ್ರತಾರಣ ಭಯತ್ತೈ ಶಮಿಪ್ಪಿಕ್ಕೈಕ್ಕಾಕವುಂ "ಪುಣ್ಯಂ ವೇದೈಶ್ಚ ಸಂಮಿತಂ" ಎನ್ಗಿರ ಪಡಿಯೇ ನಾಲು ವೇದಂಗಳುಂ ಒರು ತಟ್ಟಿಲುಂ ತಾನೊರು ತಟ್ಟಿಲು ಮಾಕ ನಿರ್ಕಿರ ಶ್ರೀರಾಮಾಯಣ ಮಾಕಿರ ಪ್ರಬಂಧತ್ತೈಯರುಳಿಚ್ಚೆಯ್ದು,

"ಚಿಂತಯಾಮಾಸ ಕೋನ್ವೇತತ್ ಪ್ರಯುಂಜೀಯಾದಿತಿ ಪ್ರಭುಃ" ಎನ್ಕಿರಪಡಿಯೇ. ಆರೈಕ್ಕೊಂಡಿಪ್ರಬಂಧತ್ತೈ ಪ್ರವರ್ತಿಪ್ಪಿಕ್ಕಕ್ಕಡವೋ ಮೆನ್ರು ಚಿಂತಿತ್ತ ಸಮಯತ್ತಿಲೇ ಕುಶಲವರ್ ವಂದು ಪಾದೋಪಸಂಗ್ರಹಣಂ ಪಣ್ಣ,

"ತೌ ತು ಮೇಧಾವಿನೌ ದೃಷ್ಟ್ವಾ ವೇದೇಷು ಪರಿನಿಷ್ಠಿತೌ ।
ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭುಃ ॥"

ಎನ್ಗಿರಪಡಿಯೇ ಉಚಿತಾಧಿಕಾರಿಮುಖತ್ತಾಲೇ ಉಪಬೃಂಹಣರೂಪಮಾನ ಇಪ್ರಬಂಧತ್ತೈ ಪ್ರವರ್ತಿಪ್ಪಿತ್ತಾರ್ ॥

ಇತಿ ಪ್ರಥಮೋಧಿಕಾರಃ

---

ಹೀಗೆ ನಾಲ್ಕು ವೇದಗಳಿಗೆ ಸಮಾನವಾದ ಶ್ರೀ ರಾಮಾಯಣವೆಂಬ ಈ ದಿವ್ಯ ಗ್ರಂಥವನ್ನು ರಚಿಸಿ, ಯಾರ ಮೂಲಕ ಇದನ್ನು ಪ್ರಕಾಶಪಡಿಸುವುದೆಂದು ವಾಲ್ಮೀಕಿ ಮಹರ್ಷಿಯು ಯೋಚಿಸುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ಬಹು ಮೇಧಾವಿಗಳಾಗಿಯೂ, ವೇದಾಧ್ಯಯನ ಸಂಪನ್ನರಾಗಿಯೂ ಎದುರಿಗೆ ಬಂದ ಕುಶಲವರನ್ನು ಕಂಡು ಅವರೇ ಯೋಗ್ಯ ಶಿಷ್ಯರೆಂದು ನಿಶ್ಚಯಮಾಡಿದರು. ಇವರ ಮೂಲಕ ವೇದೋಪಬೃಂಹಣವಾದ ಶ್ರೀಮದ್ರಾಮಾಯಣವನ್ನು ಪ್ರಕಾಶಪಡಿಸಿದರು.

ಪ್ರಬಂಧಾವತಾರ ಮುಗಿಯಿತು

## 2. ಅಥ ಪರತತ್ವ ನಿರ್ಣಯಾಧಿಕಾರಃ

ಇಪ್ಪಡಿ ಇಪ್ರಬಂಧತ್ತಿಲ್ ಪಣ್ಣುಕಿರ ಬಹು ವಿಧಂಗಳಾನ ವೇದೋಪ ಬೃಂಹಣಂಗಳಿಲ್ ಪ್ರಧಾನಮಾನ ಉಪಬೃಂಹಣಂ ಶ್ವೇತಾಶ್ವತರಾದಿಗಳಿಲ್ ಶೊಲ್ಲುಕಿರ ಸರ್ವ ಶರಣ್ಯಪರತತ್ವ ವಿಷಯಮಾಯುಂ, ಸರ್ವಾಧಿಕಾರಮಾನ ಶರಣಾಗತಿರೂಪ ಪರಮಹಿತ ವಿಷಯಮಾಯುಂ ಇರಂಡುವಹೈಯಾ ಯಿರುಕ್ಕಂ

ಅತಿಲ್ ಸರ್ವ ಶರಣ್ಯಮಾನ ಪರತತ್ವತ್ತೈ ನಿಷ್ಕರ್ಷಿಕ್ಕುಮಿಡತ್ತಿಲ್ ಸರ್ವೇಶ್ವರನೈಪ್ಪತ್ತ ಸಮರೆನ್ನುಂ, ಏಕರೆನ್ನುಂ, ಅಧಿಕರೆನ್ನುಂ ಶಂಕಿತ ರಾಯಿರುಪ್ಪಾರಿರುವರುಂಡು. ಅವರ್ಕಳಾರೆನ್ನಿಲ್, ಸರ್ವೇಶ್ವರನುಡೈಯ ಮಗನುಂ ಪೇರನುಂ. ಅವರ್ಕಳಿಲ್ ಪೇರನಾನ ರುದ್ರನಿರ್ಕಾಟ್ಟಿಲ್ ಸರ್ವೇಶ್ವರರ್ ಅಧಿಕನೆನ್ನುಮಿಡತ್ತೈ

---

## 2. ಪರತತ್ವ ನಿರ್ಣಯಾಧಿಕಾರವು

ವೇದೋಪ ಬೃಹ್ಮಣದಲ್ಲಿ ಪ್ರಧಾನವಾದದ್ದು ಶ್ವೇತಾಶ್ವತರ ಉಪ ನಿಷತ್ತು. ಇದರಲ್ಲಿ ಸರ್ವಶರಣ್ಯನ ಪರತತ್ವ ವಿಷಯವೂ, ಎಲ್ಲರಿಗೂ ಸಮಾನಾಧಿಕಾರವುಳ್ಳ ಶರಣಾಗತಿರೂಪ ಪರಮಹಿತವಾದ ವಿಷಯವೂ ನಿರೂಪಿತವಾಗಿರುವುದು. ಇದರಲ್ಲಿ ಸರ್ವಶರಣ್ಯನ ಪರತತ್ವವನ್ನು ನಿಷ್ಕರ್ಷಿ ಸುವಾಗ ಸರ್ವೇಶ್ವರನಿಗೆ ಸಮರು ಒಬ್ಬರೆಂದೂ, ಅವನಿಗಿಂತ ಅಧಿಕರು ಇನ್ನೊಬ್ಬರೆಂದೂ ಆಕ್ಷೇಪಿಸುವವರು ಇಬ್ಬರಿದ್ದಾರೆ. ಅವರು ಯಾರೆಂದರೆ, ಸರ್ವೇಶ್ವರನ ಮಗನಾದ ಚತುರ್ಮುಖನೂ, ಮೊಮ್ಮಗನಾದ ರುದ್ರನೂ ಎಂಬುವರು. ಇವರಿಬ್ಬರಲ್ಲಿ ಮೊಮ್ಮಗನಾದ ರುದ್ರನಿಗಿಂತ ಸರ್ವೇಶ್ವರನು ಅಧಿಕನೆಂಬುವ ವಿಷಯವನ್ನು ಪರಶುರಾಮನು ತನ್ನ ವಾಕ್ಯದಿಂದ ಪ್ರಕಾಶ ಪಡಿಸಿದನು.

ರಾವಣ ವಧಾನಂತರ, ಬ್ರಹ್ಮಾದಿ ದೇವತೆಗಳು ಶ್ರೀರಾಮನನ್ನು ಕುರಿತು 'ಸ್ವಾಮಿ ! ಕರ್ತೃವಾಗಿಯೂ ಸರ್ವಜ್ಞನಾಗಿಯೂ, ದೇವಸಮು ದಾಯಗಳಲ್ಲಿ ಸರ್ವ ಶ್ರೇಷ್ಠನಾಗಿಯೂ ಇರುವ ನೀನು, ಅಗ್ನಿಯಲ್ಲಿ ಬೀಳು ತ್ತಿರುವ ಜನಕರಾಜನ ಪುತ್ರಿಯಾದ ಸೀತಾದೇವಿಯನ್ನು ಪ್ರಾಕೃತ

"ಜೃಂಭಿತಂ ತದ್ಧನುರ್ದೃಷ್ಟ್ವಾ ಶೈವಂ ವಿಷ್ಣುಪರಾಕ್ರಮೈಃ।
ಅಧಿಕಂ ಮೇನಿರೇ ವಿಷ್ಣುಂ ದೇವಾಸ್ಸರ್ಷಿಗಣಾಸ್ತದಾ॥

ಎನ್ರು ಪರಶುರಾಮ ವಾಕ್ಯತ್ತಾಲೇ ವೆಳಿಯಿಟ್ಟಾರ್. ರಾವಣ ವಧಾನಂತರಂ ದೇವರ್ಕಳ್ ಪೆರುಮಾಳೈಸ್ತೋತ್ರಂ ಪಣ್ಣುಕಿರಪೋದು ಬ್ರಹ್ಮಾದಿ ಸರ್ವ ದೇವತೈ ಕಳುಡೈಯ

"ಕರ್ತಾ ಸರ್ವಸ್ಯ ಲೋಕಸ್ಯ ಶ್ರೇಷ್ಠೋ ಜ್ಞಾನವತಾಂ ವಿಭುಃ।
ಉಪೇಕ್ಷಸೇ ಕಥಂ ಸೀತಾಂ ಪತಂತೀಂ ಹವ್ಯವಾಹನೇ॥
ಕಥಂ ದೇವಗಣಶ್ರೇಷ್ಠ ನಾತ್ಮಾನಮವಬುಧ್ಯಸೇ।
ಉಪೇಕ್ಷಸೇ ವಾ ವೈದೇಹೀಂ ಮಾನುಷಃ ಪ್ರಾಕೃತೋ ಯಥಾ॥"

ಎನ್ಕಿರ ವಾಕ್ಯತ್ತಾಲೇ ಪೆರುಮಾಳುಡೈಯ ಸರ್ವಸ್ಮಾತ್ ಪರತತ್ವತ್ತೈ ಸ್ಥಾಪಿತ್ತಾರ್, ಅನಂತರಂ ದೇವರ್ಕಳ್‌ತವಿರ ಬ್ರಹ್ಮಾ ತನಿತ್ತು ಸ್ತೋತ್ರಂ ಪಣ್ಣುಕಿರವಿಡತ್ತಿಲುಂ, ಯೆದಿರಿಕ್ಕೈ ಯಾಲೇ ವಿಡುತೀಟ್ಟಾನ ಕಣಕ್ಕಿಲೇ "ಅಕ್ಷರಂ ಬ್ರಹ್ಮ ಸತ್ಯಂ ತ್ವಂ" ಎನ್ರು ಸರ್ವ ವಿಲಕ್ಷಣಮಾನ ಪರಬ್ರಹ್ಮಂ ಪೆರುಮಾಳೆನ್ನು ಮಿಡತ್ತೈಯುಂ

"ತ್ವಂ ತ್ರಯಾಣಾಂ ಹಿ ಲೋಕಾನಾಮಾದಿಕರ್ತಾ ಸ್ವಯಂಪ್ರಭುಃ।"
ಎನ್ರು ಬ್ರಹ್ಮಲಕ್ಷಣಮಾನ ಜಗತ್ಕಾರಣತ್ವತ್ತೈಯುಂ "ಜಗತ್ಸರ್ವಂ ಶರೀರಂ ತೇ" ಎನ್ರು ಸರ್ವ ಶರೀತ್ತೈಯುಂ "ಅಹಂ ತೇ ಹೃದಯಂ ರಾಮ

---

ಮನುಷ್ಯರಂತೆ ಉಪೇಕ್ಷಿಸಬಹುದೇ ?' ಎಂದು ಸ್ತೋತ್ರಮಾಡುವರು. ಇದರಿಂದ ವಾಲ್ಮೀಕಿಮಹರ್ಷಿಯು ಪರಮಾತ್ಮನ ಪರತತ್ವವನ್ನು ಸ್ಥಾಪಿಸಿದ್ದಾನೆ.

ಅನಂತರ ಚತುರ್ಮುಖ ಬ್ರಹ್ಮನು ದೇವತೆಗಳನ್ನು ಬಿಟ್ಟು ತಾನೇ ಪ್ರತ್ಯಕ್ಷವಾಗಿ ಸ್ತೋತ್ರಮಾಡುವ ಸಂದರ್ಭದಲ್ಲಿ "ಅಕ್ಷರಂ ಬ್ರಹ್ಮ ಸತ್ಯಂ ತ್ವಂ' ಎಂದು ಸರ್ವ ವಿಲಕ್ಷಣನಾದ ಪರಬ್ರಹ್ಮ ಸ್ವರೂಪವೇ ಶ್ರೀ ರಾಮನು ಎಂದು ಹೇಳಿದ್ದಾನೆ. ಇಷ್ಟೇ ಅಲ್ಲದೆ ಪರಬ್ರಹ್ಮ ಲಕ್ಷಣವಾದ ಜಗತ್ಕಾರಣತ್ವವನ್ನು ಸೂಚಿಸಿ, 'ಅಹಂ ತೇ ಹೃದಯಂ ರಾಮ' ಇತ್ಯಾದಿಯಾಗಿ ಹೇಳಿದ್ದಾನೆ. ಶ್ರುತಿ ವಾಕ್ಯದ ಪ್ರಕಾರ ಹೃದಯ ಶಬ್ದಕ್ಕೆ ಪುತ್ರಪರ

ಜಿಹ್ವಾ ದೇವೀ ಸರಸ್ವತೀ" ಇತ್ಯಾದಿಕಳಾಲೇ ಶ್ರೌತ ಪ್ರಯೋಗತ್ತಿಲ್ ಪುತ್ರಪರಮಾನ ಹೃದಯ ಶಬ್ದತ್ತಾಲೇ ಬ್ರಹ್ಮಾವಿನುಡೈಯ ಕಾರ್ಯತ್ವತ್ತೈಯುಂ, ಮತ್ತುಮುಳ್ಳ ದೈವತ್ತೈಕಳೆಲ್ಲಾಂ ವಿಭೂತ್ಯೇಕದೇಶಮಾನ ಪಡಿಯೈಯುಂ "ಶರಣ್ಯಂ ಶರಣಂ ಚ ತ್ವಾಮಾಹುರ್ದಿವ್ಯಾ ಮಹರ್ಷಯಃ" ಎನ್ರು ಸರ್ವಶರಣ್ಯತ್ವತ್ತೈಯುಂ ಪೇಶಿನಾರ್ ಯಾವನೊರುವರ್ ಬ್ರಹ್ಮಾವೈ ಮುರ್ಪಡ ಸೃಷ್ಟಿಕ್ಕಿರಾನೆನ್ರು ಶ್ವೇತಾಶ್ವತರೋಪನಿಷತ್ತಿಲೇ ಅಧೀತಮಾನ ಅರ್ಥತ್ತೈ ಉತ್ತರ ಶ್ರೀ ರಾಮಾಯಣತ್ತಿಲೇ ಬ್ರಹ್ಮಾ ತನ್ನುಡೈಯ ವಾಕ್ಯತ್ತಾಲೇ ಪೇಶಿನಾರ್. ಎಂಗನೇಯೆನ್ನಿಲ್

"ಸಮಯಸ್ತೇ ಮಹಾಬಾಹೋ ಸ್ವಾನ್ ಲೋಕಾನ್ ಪರಿರಕ್ಷಿತುಂ |
ಸಂಕ್ಷಿಪ್ಯ ಚ ಪುರಾ ಲೋಕಾನ್ ಮಾಯಯಾ ಸ್ವಯಮೇವ ಹಿ||
ಮಹಾರ್ಣವೇ ಶಯಾನೋಽಪ್ಸು ಮಾಂ ತ್ವಂ ಪೂರ್ವಮಜೀಜನಃ||"

ಎನ್ರು ತೊಡಂಗಿ

"ಪದ್ಮೇ ದಿವ್ಯೇಽರ್ಕಸಂಕಾಶೇ ನಾಭ್ಯಾಮುತ್ಪಾದ್ಯ ಮಾಮಪಿ |
ಪ್ರಾಜಾಪತ್ಯಂ ತ್ವಯಾ ಕರ್ಮ ಸರ್ವಂ ಮಯಿ ನಿವೇಶಿತಂ ||
ಸೋಽಹಂ ಸನ್ನ್ಯಸ್ತ ಭಾರೋಹಿ ತ್ವಾಮುಪಾಸೇ ಜಗತ್ಪತಿಂ |
ರಕ್ಷಾಂ ವಿಧತ್ಸ್ವ ಭೂತೇಷು ಮಮ ತೇಜಸ್ಕರೋ ಭವಾನ್ ||

---

ವಾಗಿ ಕಾರ್ಯತ್ವವನ್ನೂ, ಇತರ ದೇವತೆಗಳೆಲ್ಲರಿಗೂ ಇವನ ವಿಭೂತಿ ಏಕದೇಶವಾಗಿರುವಿಕೆಯನ್ನೂ 'ಶರಣ್ಯಂ ಶರಣಂ ಚ ತ್ವಂ' ಇತ್ಯಾದಿಗಳಿಂದ, ಶರಣಾಗತಿ ರಕ್ಷಕತ್ವವನ್ನೂ ತಿಳಿಸಿದನು.

ಪರಮಾತ್ಮನು ಬ್ರಹ್ಮನನ್ನು ಮೊದಲು ಸೃಷ್ಟಿಸಿ ಅವನ ಮೂಲಕವಾಗಿ ಇತರ ಜಗತ್ತನ್ನು ಸೃಷ್ಟಿಮಾಡಿಸಿದನೆಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿರುವುದನ್ನೇ ಉತ್ತರ ರಾಮಾಯಣದಲ್ಲಿ ಚತುರ್ಮುಖನು ಹೀಗೆ ಹೇಳಿರುವನು 'ಹೇ! ಭಗವಂತನೇ! ಸಮಸ್ತ ಜಗತ್ತನ್ನು ರಕ್ಷಿಸಲು ನೀನು ಮಾಯೆಯಿಂದ ಸರ್ವ ಲೋಕವನ್ನು ಉಪಸಂಹರಿಸಿ ಮಹಾ ಸಮುದ್ರದಲ್ಲಿ ಮಲಗಿರುವಾಗ, ನಿನ್ನ ನಾಭಿ ಕಮಲದಿಂದ ನನ್ನನ್ನು ನೀನು ಸೃಷ್ಟಿ

ತತಸ್ತ್ವಮಪಿ ದುರ್ಧರ್ಷ ಸ್ತಸ್ಮಾದ್ಭಾವಾತ್ಸನಾತನಾತ್ ।
ರಕ್ಷಾರ್ಥಂ ಸರ್ವ ಭೂತಾನಾಂ ವಿಷ್ಣುತ್ವ ಮುಪಜಗ್ಮಿವಾನ್ ॥
ಅದಿತ್ಯಾಂ ವೀರ್ಯವಾನ್ ಪುತ್ರೋ ಭ್ರಾತೄಣಾಂ ಹರ್ಷವರ್ಧನಃ ।
ಸಮುತ್ಪನ್ನೇಷು ಕೃತ್ಯೇಷು ಲೋಕಸ್ಯಾರ್ಥಾಯ ಕಲ್ಪಸೇ ॥
ಸ ತ್ವಂ ವಿತ್ರಾಸ್ಯಮಾನಾಸು ಪ್ರಜಾಸು ಜಗತೋಽಧುನಾ ।
ರಾವಣಸ್ಯ ವಧಾಕಾಂಕ್ಷೀ ಮಾನುಷೇಷು ಮನೋದಧಾಃ ॥

ಎನ್ರು ಸರ್ವೇಶ್ವರನ್ ಪರಮಕಾರಣಮಾನ ಪಡಿಯೈಯುಂ, ತಾನವನುಕ್ಕು ಕಾರ್ಯಭೂತನುಮಾಯ್ ಪರತಂತ್ರನುಮಾಯ್ ತದಧೀನಪದಲಾಭನುಮಾಯಿರುಂದ ಪಡಿಯೈಯುಂ ತಂಗಳ್ ನಡವುಂ ರಾಜವಂಶತ್ತಿಲ್ ನಡುವುಂ ಸರ್ವೇಶ್ವರನ್ ಮತ್ಸ್ಯಾದಿ ಕಳುಡೈಯ ಮಧ್ಯತ್ತಿಲೇ ಪೋಲೇ ಸ್ವೇಚ್ಛೆಯಾಲೇ ಅವತರಿಕ್ಕಿರಾನೆನ್ನು ಮಿಡತ್ತೈಯುಂ ಬ್ರಹ್ಮಾವಿಣ್ಣಪ್ಪಂ ಶೈತಾನ್ ।

ತನ್ನುಡೆಯ ಜ್ಯೋತಿಕ್ಕೈೞುನ್ತರುಳುಕಿರಪೋತುಂ,

“ಆಗಚ್ಛ ವಿಷ್ಣೋ ಭದ್ರಂ ತೇ ದಿಷ್ಟ್ಯಾ ಪ್ರಾಪ್ತೋಽಸಿ ಮಾನದ ।
ಭ್ರಾತೃಭಿಸ್ಸಹ ದೇವಾಭೈಃ ಪ್ರವಿಶಸ್ವ ಸ್ವಕಾಂ ತನುಂ ॥

---

ಸಿದೆ. ಅನಂತರ ನಾನು ಪ್ರಜಾಸೃಷ್ಟಿಕಾರ್ಯ ಮಾಡುವಂತೆ ನನಗೆ ಅನುಗ್ರಹಿಸಿದೆ. ಆ ಕೆಲಸವು ನಿರಾತಂಕವಾಗಿ ನಡೆಯುವಹಾಗೆ, ನಿನ್ನ ತೇಜಸ್ಸನ್ನು ನನ್ನಲ್ಲಿ ಅಂತರ್ಗತಮಾಡಿದೆ. ಅದರಂತೆ ಸೃಷ್ಟಿಕಾರ್ಯವು ಅವಿಚ್ಛಿನ್ನವಾಗಿ ನಡೆಯಲು ನೀನು ಸರ್ವಭೂತ ರಕ್ಷಣಾರ್ಥವಾಗಿ ಅದಿತಿಯಲ್ಲಿ ಉಪೇಂದ್ರನಾಗಿ ಅವತರಿಸಿದೆ. ಈಗ ರಾವಣನಿಂದ ಜಗತ್ತೆಲ್ಲವೂ ಪೀಡಿಸಲ್ಪಡುವುದರಿಂದ, ಆ ರಾವಣ ವಧಕ್ಕಾಗಿ, ಮನುಷ್ಯರೂಪದಲ್ಲಿ ಅವತರಿಸಿರುವೆ’ ಎಂದು ಹೇಳಿ ಸರ್ವೇಶ್ವರನೇ ಜಗತ್ಕಾರಣಭೂತನೆಂದೂ, ತಾನು ಅವನಿಗೆ ಕಾರ್ಯಭೂತನಾಗಿಯೂ, ಪರತಂತ್ರನಾಗಿಯೂ ಅವನ ದಯೆಯಿಂದ ಲಭಿಸಿದ ಚತುರ್ಮುಖ ಪದವಿಯುಳ್ಳವನಾಗಿಯೂ ಇರುವುದಾಗಿ ಹೇಳುವನು. ಮತ್ತು ರಾಜವಂಶದಲ್ಲಿ, ಮತ್ಸ್ಯಾದಿರೂಪದಲ್ಲಿ ತನ್ನ

ವೈಷ್ಣವೀಂ ತಾಂ ಮಹಾತೇಜಾಸ್ತ್ವಚ್ಚಾಕಾಶಂ ಸನಾತನಂ ।
ತ್ವಂ ಹಿ ಲೋಕಪತಿರ್ದೇವ ನ ತ್ವಾಂ ಕೇಚನ ಜಾನತೇ ॥
ಋತೇ ಮಾಯಾಂ ವಿಶಾಲಾಕ್ಷೀಂ ತವ ಪೂರ್ವಪರಿಗ್ರಹಾಂ ।
ಯಾಮಿಚ್ಛಸಿ ಮಹಾತೇಜಸ್ತಾಂ ತನುಂ ಪ್ರವಿಶ ಸ್ವಯಂ ॥"

ಎನ್ರು ವಿಣ್ಣಪ್ಪಂ ಶೆಯ್ದಾರ್. ಇಪ್ಪಡಿಯಾಲ್ ಬ್ರಹ್ಮಾದಿಕಳುಕ್ಕುಂ ಕೂಡ ಶರಣಮಾಯ್ ಚರಮಕಾರಣಮಾನ ಪರತತ್ವತ್ತೈ ಪ್ರತಿಪಾದಿಕ್ಕಿರ ವೇದ ಭಾಗಂಗಳುಕ್ಕು ಉಪಬೃಂಹಣಂ ಪಣ್ಣಿನಾರ್

ಇತಿ ದ್ವಿತೀಯೋಧಿಕಾರಃ

---

ಸ್ವೇಚ್ಛಾನುಗುಣವಾಗಿ ತತ್ಕಾಲೋಚಿತವಾದ ಅವತಾರಗಳನ್ನು ಪರಮಾತ್ಮನೇ ತಾಳುವನು ಎಂಬುದಾಗಿ ವಿಜ್ಞಾಪಿಸಿರುವನು.

ಮುಂದೆ ಶ್ರೀರಾಮನು, ತನ್ನ ಮೂಲಸ್ಥಾನಕ್ಕೆ ಬಿಜಯಮಾಡಿಸುವಾಗ 'ಆಗಚ್ಛ ವಿಷ್ಣೋ ಭದ್ರಂ ತೇ ದಿಷ್ಟ್ಯಾಪ್ರಾಪ್ತೋಸಿ ಮಾನದ। ಭ್ರಾತೃಭಿಸ್ಸಹದೇವಾಭೈಃ ಪ್ರವಿಶಸ್ವ ಸ್ವಕಾಂತನುಂ' ಇತ್ಯಾದಿಯಾಗಿ ವಿಜ್ಞಾಪಿಸಿರುವನು. ಹೀಗೆ ಬ್ರಹ್ಮಾದಿಗಳಿಗೂ ಶರಣ್ಯನೆನಿಸಿರುವ, ಪರಮಕಾರಣವಾದ ಪರತತ್ವ ಸ್ವರೂಪವನ್ನು ಹೇಳುವ ವೇದಭಾಗಗಳಿಗೆ, ವಾಲ್ಮೀಕಿ ಮಹರ್ಷಿಯು ರಾಮಾಯಣವನ್ನು ಉಪಬೃಂಹಣವಾಗಿ ನಿರೂಪಿಸಿದ್ದಾನೆ.

ಪರತತ್ವ ನಿರ್ಣಯಾಧಿಕಾರ ಮುಗಿಯಿತು

---

## 3. ಶರಣಾಗತಿ ತಾತ್ಪರ್ಯ ಪ್ರಪಂಚಃ ತೃತೀಯೋಧಿಕಾರಃ

ಇಪ್ಪಡಿ ಸರ್ವ ಶರಣ್ಯಮಾನ ಪರತತ್ವತ್ತಿನುಡೈಯ ವಶೀಕರಣ ಸಮರ್ಥಮಾಯ್, ಪರಮ ಹಿತಮಾಯಿರುಕ್ಕಿರ ಶರಣಾಗತಿ ಧರ್ಮತ್ತುಕ್ಕು ವಿಧಾಯಕಂಗಳಾನ ವೇದಭಾಗಂಗಳ್ಳೆ ಇಪ್ರಬಂಧತ್ತಿಲ್ ಉಪಕ್ರಮಾದಿಗಳಾಲೆ ಉಪಬೃಂಹಿತತ್ತಾರ್. ಎಂಗನೇ ಎನ್ನಿಲ್ ; ಅವತಾರಾರಂಭತ್ತಿಲೇ ಮುರ್ಪಡ ಚಕ್ರವರ್ತಿಯಿನುಡೈಯ ಯಜ್ಞತ್ತಿಲೇ ಹವಿರ್ಭಾಗ ಗ್ರಹಣಾರ್ಥಮಾಕತ್ತಿರಣ್ಡ ದೇವರ್ಕಳ್ ರಕ್ಷಕಾಕಾಂಕ್ಷಿಗಳಾಯ್ "ಆವಾರಾರ್ ತುಣೈ" ಎನ್ರುನಿರ್ಕಿರ ವಳವಿಲೇ

"ಏತಸ್ಮಿನ್ನಂತರೇ ವಿಷ್ಣುರುಪಯಾತೋ ಮಹಾದ್ಯುತಿಃ |
ಶಂಖಚಕ್ರಗದಾಪಾಣಿಃ ಪೀತವಾಸಾ ಜಗತ್ಪತಿಃ ||"

---

## 3. ಶರಣಾಗತಿ ತಾತ್ಪರ್ಯ ಪ್ರಪಂಚಾಧಿಕಾರ.

ಹಿಂದಿನ ಅಧಿಕಾರದಲ್ಲಿ ಪರತತ್ವ ವಿಶೇಷವನ್ನು ನಿರ್ಣಯಮಾಡಿ ಅಂತಹ ಸರ್ವಸಮರ್ಥ ಮತ್ತು ಪರಮ ಕಾರುಣಿಕನಾದ ಪರತತ್ವದಲ್ಲಿಯೇ ಚೇತನನು ತನ್ನ ಶರಣಾಗತಿಯನ್ನು ಅರ್ಪಿಸಬೇಕೆಂದು ಈ ಅಧಿಕಾರದಲ್ಲಿ ಶರಣಾಗತಿ ತಾತ್ಪರ್ಯ ಪ್ರಪಂಚವನ್ನು ನಿರೂಪಿಸಲಾಗಿದೆ.

ಸರ್ವ ಶರಣ್ಯನಾದ, ಪರಾತ್ಪರ ವಸ್ತುವನ್ನು ಒಲಿಸಿಕೊಳ್ಳಲು ಸಮರ್ಥವಾಗಿಯೂ, ಉತ್ತಮರು, ಅಧಮರು ಎಂಬ ವಿಭಾಗವಿಲ್ಲದೆ ಸರ್ವರೂ ಅನುಷ್ಠಿಸಲು ತಕ್ಕುದಾಗಿಯೂ, ಚೇತನನಿಗೆ ಪರಮ ಹಿತವಾಗಿಯೂ ಇರುವ ಶರಣಾಗತಿಧರ್ಮಕ್ಕೆ ವಿದಿತವಾದ ಶ್ರುತಿವಾಕ್ಯಾರ್ಥವನ್ನು ಶ್ರೀ ರಾಮಾಯಣದಲ್ಲಿ ಶ್ರೀ ವಾಲ್ಮೀಕಿ ಮಹರ್ಷಿಯು ಉಪಕ್ರಮ ಉಪಸಂಹಾರಾದಿ ಸಂದರ್ಭಗಳಲ್ಲಿ ಬಹು ಚೆನ್ನಾಗಿ ವಿವರಿಸಿರುವನು. ಹೇಗೆಂದರೆ, ಶ್ರೀರಾಮನು ಅವತರಿಸುವುದಕ್ಕೆ ಮುಂಚೆ ದಶರಥನ ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬಂದ ದೇವತೆಗಳು 'ತಮ್ಮನ್ನು ರಕ್ಷಿಸತಕ್ಕವರು ಯಾರು ? ಕಷ್ಟಗಳಿಂದ ಪಾರುಮಾಡುವವರು ಯಾರು ? ಎಂದು ಯೋಚಿಸುತ್ತಿರುವಾಗ. ಆ ಸಮಯದಲ್ಲಿ ಸರ್ವಶೇಷಿಯಾಗಿಯೂ, ಸರ್ವೇಶ್ವರ

ಎನ್ನಿರಪಡಿಯೇ, ಸರ್ವಶೇಷಿಯಾನ ಸರ್ವೇಶ್ವರರ್ ಅವಕಾಶಂ ಪಾರ್ತ್ತು ರಕ್ಷಣ ಸನ್ನಾಹತ್ತಾಲುಂಡಾನ ಪುಕರ್ತ್ತೋನ್ರುಂ ಪಡಿ ರಕ್ಷಣೋಪಕರಣಂ ಗಳೋಡೆ ಕೂಡಕ್ಕಟೆಯುಡುತ್ತು ವಂದುತೋತ್ತ

"ಸಿದ್ಧಗಂಧರ್ವಯಕ್ಷಾಶ್ಚ ತತಸ್ತ್ವಾಂ ಶರಣಂ ಗತಾಃ ।"

ಎನ್ರು ದೇವಜಾತಿಯಿಲುಳ್ಳಾರೆಲ್ಲಾರುಮಿರುಂದತೇ ಕುಡಿಯಾಕ ಶರಣಾ ಗತರಾನ ಪಡಿ ಶೊನ್ನಾರ್

ತ್ರಿಶಂಕು ಶುನಶ್ಶೇಫಾದಿ ವೃತ್ತಾಂತಂಗಳಿಲುಂ ವಿಶ್ವಾಮಿತ್ರಾದಿ ವ್ಯಾಪಾರ ವಿಶೇಷಂಗಳೈ ಚ್ಚೊಲ್ಲಿ, ಶರಣಾಗತ ರಕ್ಷಣಂ ಪರಮಧರ್ಮ ಮೆನ್ರುಂ ಸಮರ್ಥ ಕಾರುಣಿಕ ವಿಷಯ ಶರಣಾಗತಿ ಫಲಾವಿನಾಭೂತೈ ಯೆನ್ರುಂ ಕಾಟ್ಟಿನಾರ್. ಇಳೈಯ ಪೆರುಮಾಳ್

"ಸ ಭ್ರಾತುಶ್ಚರಣೌ ಗಾಢಂ ನಿಪೀಡ್ಯ ರಘುನಂದನಃ।
ಸೀತಾಮುವಾಚಾತಿಯಶಾ ರಾಘವಶ್ಚ ಮಹಾವ್ರತಂ ॥

---

ನಾಗಿಯೂ, ಇರುವ ಮಹಾ ವಿಷ್ಣುವು ದೇವತೆಗಳ ಮನಸ್ಸಿನಲ್ಲಿರುವ ರಕ್ಷಣಾಪೇಕ್ಷೆಯು ಫಲಿಸುವಂತೆ, ಮಾಡಿದನು. ರಕ್ಷಣೆಯ ಸಾಮಗ್ರಿ ಗಳೊಡಗೂಡಿ, ಸಿದ್ಧ ಗಂಧರ್ವಯಕ್ಷಾದಿ ದೇವತೆಗಳೆಲ್ಲರೂ ಭಗವಂತನಲ್ಲಿ ಶರಣಾಗತಿ ಮಾಡಿದರು.

ತ್ರಿಶಂಕು ಶುನಶ್ಶೇಫಾದಿ ವೃತ್ತಾಂತಗಳಲ್ಲಿ ವಿಶ್ವಾಮಿತ್ರಾದಿಗಳು ನಡೆ ಸಿದ ವ್ಯಾಪಾರ ವಿಶೇಷವನ್ನು ತಿಳಿಸಿ ಶರಣಾಗತ ರಕ್ಷಣವೇ ಪರಮ ಧರ್ಮ ವೆಂದೂ, ಶರಣಾಗತನನ್ನು ರಕ್ಷಿಸಲು ಶಕ್ತನಾದ ಪರಮ ಕಾರುಣಿಕನಾದ ಪರಮಾತ್ಮನಲ್ಲಿ ಮಾಡಿದ ಶರಣಾಗತಿಯು ತಪ್ಪದೆ ಫಲವನ್ನು ಕೊಡುವು ದೆಂದೂ ಮಹರ್ಷಿ ತಿಳಿಸಿದ್ದಾನೆ.

ಲಕ್ಷ್ಮಣನು ಶರಣಾಗತಿ ಉಪಾಯವನ್ನು ಪರಿಗ್ರಹಮಾಡಿ ಇದಕ್ಕೆ ಫಲವಾಗಿ, ಸಾಕ್ಷಾಲ್ಲಕ್ಷ್ಮೀದೇವಿಯ ಅವತಾರವಾದ ಸೀತಾ ದೇವಿಯೂ ಶ್ರೀರಾಮಚಂದ್ರನೂ ಒಟ್ಟಿಗೇ ಇರುವ ಸಂದರ್ಭದಲ್ಲಿ, ತಾನು ಅವರಿಗೆ ಕಿಂಕರನಾಗಿ ಸರ್ವ ವಿಧದಿಂದಲೂ ಅವರ ಸೇವೆ ಮಾಡುವುದಾಗಿ

ಎನ್ರು ಉಪಾಯ ಪರಿಗ್ರಹತ್ತೈಪ್ಪಣ್ಣಿ, ಇದಕ್ಕು ಫಲಮಾಕ

"ಕುರುಷ್ವ ಮಾಮನುಚರಂ ವೈಧರ್ಮ್ಯಂ ನೇಹ ವಿದ್ಯತೇ ।
ಕೃತಾರ್ಥೋಽಹಂ ಭವಿಷ್ಯಾಮಿ ತವ ಚಾರ್ಥಃ ಪ್ರಕಲ್ಪ್ಯತೇ॥
ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಷು ರಂಸ್ಯತೇ ।
ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚ ತೇ ॥"

ಎನ್ರು ಪೆರುಮಾಳುಂ ಪಿರಾಟ್ಟಿಯುಂ ಶೇರ್ನ್ದ ಶೇರ್ತಿಯಿಲೇ ತಾಮ ಡಿಮೈ ಶೆಯ್ಯ ಅಪೇಕ್ಷಿತ್ತಾರೆನ್ರು ಶೊಲ್ಲುಕೈಯಾಲೇ ಉಪಾಯೋಪೇಯ ಪರ ವಾಕ್ಯದ್ವಯರೂಪಮಾನ ಶರಣಾಗತಿಮಂತ್ರವಿಶೇಷತ್ತೈ ಉಪಬೃಂ ಹಿತ್ತಾರ್,

ಮುಪ್ಪಾಡರಾನ ದೇವರ್ಕಳ್ ಪಣ್ಣಿನ ಪ್ರಪತ್ತಿಕ್ಕಾಕ ರಾವಣ ವಧತ್ತುಕ್ಕು ಎಳ್ಳುನ್ದರುಳುಕೈಯುಂ ಪಿಪ್ಪಾಡರಾನ ಶ್ರೀ ಭರತಾಳ್ವಾರ್ ಪಣ್ಣಿನ ಪ್ರಪತ್ತಿಕ್ಕಾಹ ಮೀಂಡು ತಿರುವಭಿಷೇಕಂ ಪಣ್ಣಿ ರಾಜ್ಯಂ ಪಣ್ಣು ಕೈಯ್ಯುಂ ಅವಿರುದ್ಧಮಾನಪಡಿಯಾಲೇ ಶ್ರೀ ಭರತಾಳ್ವಾನುಕ್ಕು ಪ್ರಪತ್ತಿ ಪಣ್ಣಿನ ಪೋತೇ ಪರಮಫಲಂ ಶಡಕ್ಕೆನತ್ತಲೈಕ್ಕಟ್ಟಿತ್ತಿಲ್ಲೈಯೇ ಯಾಕಿಲುಂ, ಅವರುಕ್ಕು ಕೈಕೆಯಿ (ವರತ್ತಾಲೇ) ಕಲಹತ್ತಾಲೇ ಪ್ರಸಕ್ತ

---

ಹೇಳಿದನು. ಇದರಿಂದ ಶರಣಾಗತಿ ರೂಪವಾದ ಉಪಾಯವನ್ನೂ, ಅದಕ್ಕೆ ಪ್ರಾಪ್ಯವಾದ ಫಲವನ್ನೂ ಸೂಚಿಸುವ, ಪೂರ್ವೋತ್ತರ ಖಂಡ ಗಳಿಂದ ಕೂಡಿದ ಶರಣಾಗತಿ ಮಂತ್ರದ ಸಾರವಾದ ಅರ್ಥವನ್ನು ಇಲ್ಲಿ ಪ್ರತಿಪಾದಿಸಿದಂತಾಯಿತು

ಮೊದಲು ದೇವತೆಗಳು ಮಾಡಿದ ಶರಣಾಗತಿಗೆ ಫಲವಾಗಿ ರಾವಣ ವಧಕ್ಕಾಗಿ ಶ್ರೀರಾಮನು ಅವತಾರ ಮಾಡಿದುದೂ, ನಂತರ ಚಿತ್ರಕೂಟದಲ್ಲಿ ಭರತನು ಮಾಡಿದ ಪ್ರಪತ್ತಿಗೆ ಫಲವಾಗಿ, ರಾವಣ ವಧಾನಂತರ ಶ್ರೀ ರಾಮನು ಪಟ್ಟಾಭಿಷಿಕ್ತನಾಗಿ ರಾಜ್ಯ ಪರಿಪಾಲನೆಮಾಡಿದುದೂ, ಪರಸ್ಪರ ವಿರುದ್ಧವಲ್ಲ. ಹೇಗೆಂದರೆ, ಭರತನು ಆಚರಿಸಿದ ಶರಣಾಗತಿಗೆ ತತ್‌ಕ್ಷಣವೇ ಫಲಸಿದ್ಧಿಯಾಗದಿದ್ದರೂ, ಕೈಕೇಯಿಗೆ ದಶರಥನು ಕೊಟ್ಟ ವರಬಲದಿಂದ ಉಂಟಾದ ಕಲಹ ದೋಷವು ಹೋಗುವಂತೆ, ಶ್ರೀರಾಮನು ತನ್ನ ಪಾದ

ಮಾನ ಅವದ್ಯಂ ತೀರುಂಪಡಿ "ಮರವಡಿಯೈತ್ತಂಬಿಕ್ಕು ವಾನ್ ಪಣೈಯಂ ವೈತ್ತುಪ್ಪೋಯ್ ವಾನೋರ್ ವಾೞ" ಎನ್ಗಿರಪಡಿಯೇ ಅಪ್ಪೋದು ಸಾಕ್ಷಾತ್ಫಲಮಾನ ತಿರುವಡಿಕಳುಕ್ಕು ಪ್ರತಿನಿಧಿಯಾನ ಶ್ರೀ ಶಠಕೋಪನಾಲೇ ಸಫಲತ್ವಂ ಶೊಲ್ಲಿ ಪಿನ್ಬು ಪೂರ್ವಪ್ರತಿಜ್ಞಾತಮಾನ ದೇವಕಾರ್ಯಂ ತಲೈಕ್ಕಟ್ಟಿನವಾರೇ ಶ್ರೀ ಪುಷ್ಪಕ ವಿಮಾನತ್ತಾಲೇ ಸಾಕ್ಷಾತ್ಫಲಮಾನ ತಿರುವಡಿಕಳ್ ಸ್ವಯಮಾಗತಂಗಳಾಯ್ ಅಯತ್ನ ಲಬ್ಧಂಗಳಾನ ಪಡಿ ಶೊನ್ನಾರ್.

ಅಪ್ಪಡಿಯೇ

"ತ್ವಾಮಾಮನಂತಿ ಕವಯಃ ಕರುಣಾಮೃತಾಬ್ಧೇ
ಜ್ಞಾನಕ್ರಿಯಾಭಜನಲಭ್ಯಮಲಭ್ಯಮನ್ಯೈಃ ।
ಏತೇಷು ಕೇನ ವರದೋತ್ತರಕೋಸಲಸ್ಥಾಃ
ಪೂರ್ವಂ ಸದೂರ್ವಮಭಜಂತ ಹಿ ಜಂತವಸ್ತ್ವಾಂ ॥"

ಎನ್ರುಂ, 'ಪುಱ್ಪಾಮುತಲಾ ಪುಲ್ಲೆರುಂಬಾದಿಯೊನ್ರಿನ್ರಿಯೇ ನಱ್ಪಾಲಯೋತ್ತಿಯಿಲ್ ವಾೞುಂ ಶರಾಶರಂ ಮುತ್ತವುಂ ನಱ್ಪಾಲುಕ್ಕುಯ್ತ್ತನ್

---

ಕಮಲಗಳನ್ನು ಅಲಂಕರಿಸಿದ್ದ ಪಾದುಕೆಗಳನ್ನು ಅನುಗ್ರಹಿಸಿದನು. ಮೊದಲು ದೇವತೆಗಳಿಗೆ ಕೊಟ್ಟ ಪ್ರತಿಜ್ಞೆಯನ್ನು ರಾವಣ ವಧದಿಂದ ಸಾರ್ಥಕಗೊಳಿಸಿ, ಪುಷ್ಪಕ ವಿಮಾನದಲ್ಲಿ ದಯಮಾಡಿ, ಶ್ರೀರಾಮನು, ಭರತನಿಗೆ ಸಾಕ್ಷಾತ್ ಫಲವೆನಿಸಿದ ತನ್ನ ಪಾದಕಮಲಗಳನ್ನು ಅಪ್ರಯತ್ನ ಲಬ್ಧವಾದದ್ದನ್ನಾಗಿ ಮಾಡಿದನು, ಎಂದು ವಾಲ್ಮೀಕಿಮಹರ್ಷಿ ತಿಳಿಸಿದನು.

ಹಾಗೆಯೇ ಮೇಲ್ಕಂಡ ವಾಕ್ಯಗಳಲ್ಲಿ ಹೇಳಿರುವಂತೆ, ಜಂಗಮ ಸ್ಥಾವರ ವಿಭಾಗವಿಲ್ಲದೆ, ಉಪಾಯಾಧಿಕಾರಿಗಳಿಲ್ಲದೆ ಇರುವ ಎಲ್ಲಾ ಜಂತುಗಳನ್ನು, ಭರತನು ಮಾಡಿದ ಪ್ರಪತ್ತಿಯಿಂದಲೇ, ಅವನ ದೇಶವಾಸವೇ ಮುಖ್ಯವೆಂದು ತಿಳಿದು, ರಕ್ಷಿಸಬೇಕೆಂಬ ಋಷಿವಾಕ್ಯದಂತೆ, ದಂಡಕಾರಣ್ಯ ಋಷಿಗಳಿಗೆ ವಿರೋಧಿಗಳಾದ ರಾಕ್ಷಸರನ್ನು ಸಂಹರಿಸಿ, ಅವರನ್ನು ಶ್ರೀ ರಾಮನು ರಕ್ಷಿಸಿದನು. ಹೀಗೆ ರಕ್ಷಾಪೇಕ್ಷೆಯನ್ನು ಮಾಡುವ ಸಂದರ್ಭದಲ್ಲಿ ಬೇರೊಂದು ಉಪಕಾರದ ಅಗತ್ಯವಿಲ್ಲವೆಂಬುದು ಇಲ್ಲಿ ಸಿದ್ಧವಾಯಿತು.

ನಾನ್ಮುಕನಾರ್ ಪೆತ್ತನಾಟ್ಟುಳೇ' ಎನ್ರುಂ ಪೇಶುಕಿರಪಡಿಯೇ ಜಂಗಮ ಸ್ಥಾವರ ವಿಭಾಗಮರ ಉಪಾಯಾಧಿಕಾರ ಪ್ರಸಂಗ ರಹಿತಮಾನ ಜಂತುಕ್ಕಳೈಯೆಲ್ಲಾಂ ಶ್ರೀ ಭರತಾಳ್ವಾರ್ ಪಣ್ಣಿನ ಪ್ರಪತ್ತಿಯಿನಾಲೇ ಅವರುಡೈಯ ವಿಷಯವಾಸ ಮಾತ್ರಮೇ ಪತ್ತಾತಾಕ ಪಿನ್ಬು ರಕ್ಷಿಕ್ಕುಂ ಪ್ರಕಾರತ್ತುಕ್ಕು ಪ್ಪುರಂ ಶೆಯಲಾನ

"ತೇ ವಯಂ ಭವತಾ ರಕ್ಷ್ಯಾ ಭವದ್ವಿಷಯವಾಸಿನಃ |
ನಗರಸ್ಥೋ ವನಸ್ಥೋ ವಾ ತ್ವನ್ನೋ ರಾಜಾ ಜನೇಶ್ವರ ||"

ಎನ್ಗಿರ ಋಷಿಗಳ್ ವಾಕ್ಯತ್ತಿಲ್ಪಡಿಯೇ, ಅವರ್ಗಳುಕ್ಕು ವಿರೋಧಿಕಳಾನ ರಾಕ್ಷಸರೈ ನಿರಾಕರಿತ್ತು ಋಷಿಕಳೈ ರಕ್ಷಿತ್ತಪಡಿ ಶೊಲ್ಲುಕೈಯಾಲೇ ರಕ್ಷಾಪೇಕ್ಷೈ ಪಣ್ಣುಂ ಪೋತು ವೇರೋರುಪಕಾರಂ ಪಣ್ಣವೇಂಡಾ. ಅಭಿಮಾನ ಗೋಚರಮಾನ ವಿಷಯತ್ತಿಲ್ ತುವಕ್ಕಾಲೇ ಅನನ್ಯ ಶರಣತ್ವೈಯೈ ವೆಳಿಯಿಟ್ಟುಕ್ಕಿಡುಕ್ಕವವೈಯುಮೆನ್ರು ತಿರುಕ್ಕಣ್ಣಮಂಗೈಯಾಂಡಾರ್ಪಡಿಯೇ "ಕಡೈತ್ತಲೈಯಿರುನ್ದು ವಾಳುಂ ಶೋಂಬರೈಯುಕತ್ತಿ" ಎನ್ನುಮರ್ಥತ್ತೈ ವೆಳಿಯಿಟ್ಟಾರ್.

ಆದ್ರಾಪರಾಧನಾಯ್, ಉತಿರಕ್ಕೈಯನಾನ ಕಾಕಂ ಬ್ರಹ್ಮಾಸ್ತ್ರಾಭಿಮಂತ್ರಿತಮಾನ ತುರುಂಬಾಲೇ ತುರುಪ್ಪುಂಡು ಬ್ರಹ್ಮಾಮುತಲಾನ ಒನ್ರೇರಿಯೊನ್ರುಯತಾರ್ ವಾಶಲ್‌ಕಳೆಲ್ಲಾಂ ಮರೈಂದು ಎನ್ನೈಕಾತ್ತುಕ್ಕೊಳ್ಳವಲ್ಲಾರುಂಡೋವೆನ್ರು ಕದರಿನ ವಿಡತ್ತಿಲ್ ಕಾಕ್ಕೈಕ್ಕೊರುವರುಮಿಲ್ಲೈಯಾಯ್ತು ಅನ್ವಳವಿಲ್

"ಸ ಪಿತ್ರಾ ಚ ಪರಿತ್ಯಕ್ತಸ್ಸರ್ವೈಶ್ಚ ಸಮಹರ್ಷಿಭಿಃ" ಎನ್ಗಿರಪಡಿಯೇ ಪ್ರಿಯಹಿತಕಾರಿಕಳಾನ ತಾಯುಂ ತಕಪ್ಪನುಂ ಅವರ್ಗಳ್ ನಾಟ್ಟಿಲೇ

---

ಅಭಿಮಾನಕ್ಕೆ ಪಾತ್ರನಾದವನ ವಿಷಯದಲ್ಲಿ, ಅವನ ಅನನ್ಯ ಶರಣತೆಯನ್ನು ಮುಂದಿಟ್ಟು ಕಾಪಾಡುವುದು ಮುಖ್ಯ ಎಂಬುದನ್ನು ತಿರುಕ್ಕಣ್ಣಮಂಗೈ ಆಂಡಾರ್ ಅಪ್ಪಣೆ ಕೊಡಿಸಿರುವಂತೆ, ಆ ಅರ್ಥವನ್ನೇ ಇಲ್ಲಿ ವಾಲ್ಮೀಕಿ ಮಹರ್ಷಿಯು ಸೂಚಿಸಿದ್ದಾನೆ. ಕಾಕಾಸುರನನ್ನು ಅಭಿಮಂತ್ರಿತವಾದ ಒಂದು ದರ್ಭೆಹುಲ್ಲು ಓಡಿಸಿಕೊಂಡು ಹೋಯಿತು. ಅವನು

ಕುಡಿಯಿರುಕ್ಕಿರ ದೇವ ಜಾತಿಕಳುಕ್ಕುಂ ಶರಣಾಗತ ರಕ್ಷಣ ಧರ್ಮತ್ತುಕ್ಕು ಉಪದೇಷ್ಟಾಕ್ಕಳಾನ ಮಹರ್ಷಿಕಳ್ ತಾಂಗಳೇರಿಟ್ಟುಕ್ಕೊಂಡಾಲ್

ಬ್ರಹ್ಮಾಸ್ಸ್ವಯಂಭೂಶ್ಚತುರಾನನೋ ವಾ
ರುದ್ರಸ್ತ್ರಿನೇತ್ರಸ್ತ್ರಿಪುರಾಂತಕೋ ವಾ ।
ಇಂದ್ರೋ ಮಹೇಂದ್ರಸ್ಸುರನಾಯಕೋ ವಾ
ತ್ರಾತುಂ ನ ಶಕ್ತಾ ಯುಧಿ ರಾಮವಧ್ಯಂ ॥"

ಎನ್ನಿರಪ್ಪಡಿಯೇ ಇಕ್ಕಾಕತ್ತುಕ್ಕು ರಕ್ಷೈಪ್ಪಿರವಾತೆನ್ರು. ಇತಿನುಡೈಯ ಹಿತತ್ತೈ ನಿರೂಪಿತ್ತು ಪೆರುಮಾಳ್ ಕೈಕೊಳ್ಳುಕೈಕ್ಕೀಡಾಕ ಇಕ್ಕಾಕಂ "ಎಂಗುಂಪೋಯ್ಕ್ಕರೈಕ್ಕಾಣಾತು ಎರಿಕಡಲ್ ವಾಯ್ ಮೀಂಡೇಯುಂ ವಂಗತ್ತಿನ್ ಕೂಂಬೇರುಂಮಾಪ್ಪರವೈ" ಎನ್ನಿರ ಪಡಿಯೇ ಅನನ್ಯಗತಿಯಾಯ್‌ವಿಳ್ಳುವೇಣುಮೆನ್ರು ಪಾರ್ತು ಎಲ್ಲೋರುಂ ತುರತ್ತಿಕ್ಕದವೈಯುಡೈತ್ತಾರ್ಕಳ್. ಅಪ್ಪೋತು ವೇರೊರು ದಿಕ್ಕೈ ನೋಕ್ಕಿನಾಲ್ ಬ್ರಹ್ಮಾಸ್ತ್ರಂ ತುಡರುಕಿರ ಪಡಿಯೈಯುಂ ಪೆರುಮಾಳ್ ಎಳ್ಳುಂದರುಳಿಯಿರುಕ್ಕಿರದಿಕ್ಕೈ ನೋಕ್ಕಿನ ಪೋತು ಕೊಲ್ಲನಿನ್ನೈವಿಸ್ರಿಕ್ಕೆ ಶೆರುಕ್ಕಡಕ್ಕ ನಿನ್ನೈತ್ತಿರುಕ್ಕಿರ ಸರ್ವ ಲೋಕಶರಣ್ಯರ್ ತಿರುವುಳ್ಳತ್ತೈಯರಿಂದ ಬ್ರಹ್ಮಾಸ್ತ್ರಂ ಕಾಲ್ ತಾಳ್ಕಿರ ಪಡಿಯೈಯುಂ ಕಂಡ ಕಾಕಂ ತಪ್ಪಿಪ್ಪೋಕ ನಿನೈವುಂಡಾಯಿರುಕ್ಕಚ್ಚೆಯ್ದೆಯುಂ

---

ಬ್ರಹ್ಮನೇ ಮೊದಲಾದ ಎಲ್ಲ ದೇವತೆಗಳ ಮನೆ ಹೊಕ್ಕು ತನ್ನನ್ನು ರಕ್ಷಿಸಲು ಯಾರೂ ಇಲ್ಲವೇ ಎಂದು ಆರ್ತನಾಗಿ ಕೂಗಿಕೊಳ್ಳುವಾಗ, ಯಾರೂ ಅವನನ್ನು ರಕ್ಷಿಸುವ ಹೊಣೆಯನ್ನು ವಹಿಸಲಿಲ್ಲ. ಹೀಗೆ ಅವನು ತನ್ನ ತಂದೆಯಾದ ಇಂದ್ರನಿಂದಲೂ ರಕ್ಷಿತನಾಗಲಿಲ್ಲ. ಕಾಕಾಸುರನಿಗೆ ಎಲ್ಲಿಯೂ ರಕ್ಷಣೆ ದೊರೆಯಲಾರದೆ, ಅವನ ಹಿತದೃಷ್ಟಿಯಿಂದ, ಅವನು ಶ್ರೀರಾಮನಲ್ಲಿಯೇ ಹೋಗಿ ಶರಣಾಗತಿಮಾಡಬೇಕು ಎಂದು ಅವನನ್ನು ಎಲ್ಲರೂ ಓಡಿಸಿ, ತಮ್ಮ ತಮ್ಮ ನಿವಾಸದ ಬಾಗಿಲು ಮುಚ್ಚಿಕೊಂಡರು. ಅವನನ್ನು ಓಡಿಸಿಕೊಂಡು ಹೋಗುತ್ತಿದ್ದ ಬ್ರಹ್ಮಾಸ್ತ್ರವು, ಅವನು ಶ್ರೀರಾಮನ ಕಡೆಗೆ ಓಡಿಬರುವಂತೆ ಮಾಡಿತು. ಹೀಗೆ ಕಾಕಾಸುರನು ಮೂರು ಲೋಕವನ್ನು

"ತ್ರೀ ಲೋಕಾನ್ ಸಂಪರಿಕ್ರಮ್ಯ ತಮೇವ ಶರಣಂ ಗತಃ" ಎನ್ಗಿರ ಪ್ಪಡಿಯೇ ಪ್ಪೋಕ್ಕತ್ತುವಂದು ವಿೞುಂತತು. ಇಪ್ಪಡಿ ವಿೞುಂದವಿಡತ್ತಿಲೇ

"ಸ ತಂ ನಿಪತಿತಂ ಭೂಮೌ ಶರಣ್ಯಶ್ಶರಣಾಗತಂ |

ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್ ||"

ಎನ್ಗಿರಪ್ಪಡಿಯೇ ವಧಾರ್ಹಪ್ಪೋಕ್ಕತ್ತು ತಾವಿರುಂದವಿಡತ್ತಿಲೇ ವಂದು ವಿೞುಂದ ಮಾತ್ರಮೇ ಶರಣಾಗತಿಯಾಹಕ್ಕೊಂಡು ಪೆರುಮಾಳ್ ಪ್ರಾಣಾರ್ಥಿಯಾನ ಇವನಕ್ಕು ಪ್ರಾಣಪ್ರದಾನಂ ಪಣ್ಣಿ ರಕ್ಷಿತ್ತಾರ್ಗೈಯಾಲೇ ಎತ್ತನೈಯೇನುಂ ತೀರಕ್ಕಳ್ಳಿಯ ಅಪರಾಧಂ ಪಣ್ಣಿನಾರೈಯುಂ ಪ್ಪೋಕ್ಕತ್ತು ಎೞುಂದಾಲ್ ಶ್ರೀಮಚ್ಛಬ್ದತ್ತಿಲುಂ, ನಾರಾಯಣ ಶಬ್ದತ್ತಿಲುಂ ಶೊಲ್ಲುಕಿರಪಡಿಯೇ, ನಿತ್ಯಾನಂದಪಾಯಿನಿಯಾನ ಪ್ಪಿರಾಟ್ಟಿ ಸನ್ನಿಧಿಯುಂಡಾಕೈಯಾಲುಂ, ಪರಮಕಾರುಣಿಕತ್ವಾದಿಕಳಾಲುಂ ಪೆರುಮಾಳೇರಿಟ್ಟುಕ್ಕೊಂಡು, ರಕ್ಷಿಪ್ಪಾರೆನ್ನುಂ ಪರಮ ರಹಸ್ಯತ್ತೈ ವೆಳಿಯಿಟ್ಟಾರ್.

---

ಸುತ್ತಿ ಎಲ್ಲಿಯೂ ರಕ್ಷಕರು ದೊರೆಯದೆ ಶ್ರೀರಾಮನ ಪಾದಮೂಲದಲ್ಲಿ ಬಂದು ಬಿದ್ದನು. ಆಗ ವಧಾರ್ಹನಾಗಿದ್ದರೂ, ಶರಣಾಗತನೆಂಬ ಉದಾರ ಭಾವನೆಯಿಂದ ತನ್ನ ಪ್ರಾಣ ರಕ್ಷಣೆಗಾಗಿ ಬಂದು ಬಿದ್ದ ಕಾಗೆಗೆ ಪ್ರಾಣ ದಾನಮಾಡಿ ಶ್ರೀರಾಮನು ರಕ್ಷಿಸಿದನು. ಇದರಿಂದ ಎಂತಹ ಕಠಿಣ ಅಪರಾಧ ನಡೆಸಿದರೂ, ತನ್ನನ್ನು ಕ್ಷಮಿಸಬೇಕೆಂದು ಶರಣಾಗತನಾದರೆ, ಅಂತಹವನನ್ನು, ಸಾಕ್ಷಾತ್ ಲಕ್ಷ್ಮೀ ವಿಶಿಷ್ಟನಾದ ಶ್ರೀಮನ್ನಾರಾಯಣನು ಲಕ್ಷ್ಮೀಸಾನ್ನಿಧ್ಯದಿಂದ ಉಂಟಾದ ಪುರುಷಕಾರತ್ವದಿಂದ ತಪ್ಪದೆ ರಕ್ಷಿಸುವನು ಎಂಬ ಪರಮರಹಸ್ಯವನ್ನು ವಾಲ್ಮೀಕಿಯು ಇಲ್ಲಿ ಪ್ರಕಾಶಪಡಿಸಿರುವನು. ಇದರಿಂದ ಪರಮಾತ್ಮನು ಪರಮ ಕಾರುಣಿಕನೆಂಬುದೂ ಸಿದ್ಧವಾಯಿತು.

ಈ ಕಾಕಾಸುರನು ತನ್ನ ಪ್ರಾಣರಕ್ಷಣೆಗಾಗಿ ಶರಣಾಗತಿ ಮಾಡಿದುದರಿಂದ, ಆ ಪ್ರಪತ್ತಿಗೆ ಪ್ರಾಣರಕ್ಷಣೆ ಎಂಬ ಫಲ ಸಿದ್ಧಿಸಿತು. ಆದರೆ, ಒಂದು ಸಲ ಪ್ರಯೋಗಿಸಿದ ಬ್ರಹ್ಮಾಸ್ತ್ರವು ವ್ಯರ್ಥವಾಗಬಾರದೆಂಬ ನಿಯಮವಾನು

ಪ್ರಾಣಾರ್ಥಿಯಾನ ಇಕ್ಕಾಕತ್ತುಕ್ಕು ಪ್ರಾಣಪ್ರದಾನಂ ಪಣ್ಣುಕೈಯಾಲೇ ಪ್ರಪತ್ತಿಫಲಂ ಸಿದ್ಧಂ. ದುಷ್ಪ್ರಕೃತಿಯಾನ ಇಕ್ಕಾಕತ್ತುಕ್ಕು ಶಿಕ್ಷೈಯಾಕವೊರು ಕಣ್ಣೞಿವಾಲೇ ಅಸ್ತ್ರತ್ತೈವಿಲಕ್ಕಿನಾರ್, ಶ್ರೀಪರಶುರಾಮನಳವಿಲ್ ತೊಡುತ್ತ ಅಂಬೈ ಅರ್ವ ತೆಳಿನ್ದು ದ್ವಂದ್ವಯುದ್ಧಾಪೇಕ್ಷೈತವಿರ್ದವಳವಿಲ್ ಅವನುಕ್ಕು ಮನೀಷಿತ ವಿರುದ್ಧಂಗಳಾನ ಸುಕೃತಂಗಳಿಲೇಯೇವಿನಾರ್, ಸಮುದ್ರತ್ತೈಕ್ಕುರಿತ್ತು ತೊಡುತ್ತ ಅಂಬೈ ಸಮುದ್ರಾಭಿಮಾನಿ ಪುರುಷರ್ ಸಾನುತಾಪನಾಯ್ ಶರಣಾಗತನಾಕೈಯಾಲೇ, ದ್ವಿಷತ್ತುಕ್ಕಳ್ ಪಕ್ಕಲಿಲೇ ಆಶ್ರಿತರುಡೈಯ ಪಾಪಕೃತ್ಯತ್ತೈಯೇರಿಡುಂ. ಕಣಕ್ಕಿಲೇ ಸಮುದ್ರ ವಿರೋಧಿ ಕಳಾನ ಪಾಪಿಷ್ಠರ್ ಪಕ್ಕಲಿಲೇ ಏವಿನಾರ್. ಕಾಕತ್ತೈಪ್ಪತ್ತ ಅಸ್ತ್ರತ್ತೈ ಪ್ರಯೋಗಿತ್ತವಳವಿಲ್ ಪೋಕ್ಕರುತಿಯೊೞಿಯ ಉಳ್ಳೊರು ಪಶ್ಯೈಯಿಲ್ಲಾದ ಕಾಕಂ, ಶರಣಾಗತಮಾನಪೋದು ಇಕ್ಕಾಕತ್ತುಕ್ಕು ಅಪರಾಧಂ ಪಣ್ಣುಕೈಯಿಲ್ ಅಭಿಸಂಧಿ ವಿರಾಮಮಿಲ್ಲಾದ ಪಡಿ

---

ಸಾರ, ದುಷ್ಟ ಸ್ವಭಾವದ ಕಾಗೆಗೆ ಶಿಕ್ಷಾರೂಪವಾಗಿ ಅದರ ಬಲಗಣ್ಣನ್ನು ಮಾತ್ರ ಇರಿದು ಕಾಣದಂತೆ ಮಾಡಲಾಯಿತು.

ಹಾಗೆಯೇ ಪರಶುರಾಮನು, ಶ್ರೀರಾಮನ ಶಕ್ತಿಪರೀಕ್ಷೆಗಾಗಿ ಒಂದು ವೈಷ್ಣವ ಧನುಸ್ಸನ್ನು ಕೊಟ್ಟು ಬಾಣ ಪ್ರಯೋಗಮಾಡುವಂತೆ ತಿರಸ್ಕಾರ ಬುದ್ಧಿಯಿಂದ ತಿಳಿಸಿ, ಅನಂತರ ತಾನು ಅವನೊಡನೆ ದ್ವಂದ್ವಯುದ್ಧ ಮಾಡುವುದಾಗಿ ಹೇಳುವನು. ಇಂತಹ ಸತ್ವಪರೀಕ್ಷೆಯಲ್ಲಿ ಶ್ರೀರಾಮನು ವಿಜಯಿಯಾಗಿ ತಾನು ಪ್ರಯೋಗಿಸಿದ ಧನುರ್ಬಾಣವು ವ್ಯರ್ಥವಾಗದಿರುವುದಕ್ಕಾಗಿ, ಪರಶುರಾಮನ ಅಪೇಕ್ಷೆಗೆ ವಿರೋಧಿಗಳಾದ ಅವನ ಸುಕೃತಗಳೆಲ್ಲವೂ ಹಾಳಾಗುವಂತೆ ಪ್ರಯೋಗಿಸಿದನು. ಇದರಿಂದ ಅವನ ದ್ವಂದ್ವ ಯುದ್ಧದ ಆಸೆಯೂ ಹೋಯಿತು.

ಅನಂತರ ಶ್ರೀರಾಮನು, ಸಮುದ್ರರಾಜನನ್ನು ಪ್ರತ್ಯಕ್ಷವಾಗಬೇಕೆಂದು ಕೇಳಿದಾಗ ಅವನು ನಿರಾಕರಿಸುವನು. ಆಗ ಶ್ರೀರಾಮನು ಸಮುದ್ರರಾಜನ ಮೇಲೆ ಬಾಣಪ್ರಯೋಗಮಾಡುವನು. ಸಮುದ್ರಾಭಿಮಾನ ಪುರುಷನು ಪರಿತಾಪಗೊಂಡು, ಶರಣಾಗತನಾಗುವನು. ಶರಣಾ

ಯಾಲೇ "ಮತ್ತೈಕ್ಕಣ್‌ಕೊಳ್ಳಾವೇ ಕೋಲ್ ಕೊಂಡುವಾ" ಎನ್ಗಿರ ಪಡಿಯೇ ಇಸ್ಸಿಯೋರ್ ಅಪರಾಧತ್ತೋಡೆ ಮತ್ತೈಕಣ್ಣುಂ ಪೋಮೆನ್ರುಂಜಿ ದುರಭಿಸಂಧಿಯ್ಯೈ ವಿಟ್ಟು ತಿರಿಕೈಕ್ಕಾಕ ಒರುಕಣ್ಣೈ ಅಸ್ತ್ರತ್ತುಕ್ಕು ಇಲಕ್ಕಾಕ್ಕಿನಾರ್. ಆಹೈಯಾಲುಂ ಮೂನ್ರು ವೃತ್ತಾಂತಂಗಳಿಲುಂ ಅಸ್ತ್ರತ್ತುಕ್ಕು ಲಕ್ಷ್ಯಂ ಕೊಡುತ್ತಪಡಿ ಯೆಲ್ಲಾಮಾಶ್ರಿತ ಹಿತಮಾಕವೆನ್ರು ನಿರ್ಣೀತಂ.

ಕಾರ್ಯತ್ತಿಲಭಿಸಂಧಿಯುಂಡಾಯಿರುಕ್ಕ ಭೋಗ ಪ್ರಸಂಗತ್ತಾಲೇ ಅನ್ಯಪರರಾಯ್ ಕ್ಕಡುಕ ಪ್ಪೆರುಮಾಳ್ ಎಳುಂದರುಳಿಯಿರುಂದ ವಿಡತ್ತಿಲೇ ವಾರಾತವಳವಿಲೇ ಸಮುಯಾತಿಲಂಘನಂ ಪಣ್ಣಿನಾರಾಕ ಪ್ಪುಳಿಶುಮುಂದ ಮಹಾರಾಜರ್ ವಿಷಯತ್ತಿಲೇ ಇಳ್ಳೈಯಪೆರುಮಾಳುಡೈಯ ಶೀತ್ರತ್ತೈಕ್ಕಂಡ ಸನ್ಮಂತ್ರಿಯಾನ ತಿರುವಡಿ

"ಕೃತಾಪರಾಧಸ್ಯ ಹಿ ತೇ ನಾನ್ಯತ್ಪಶ್ಯಾಮ್ಯಹಂ ಕ್ಷಮಂ |
ಅಂತರೇಣಾಂಜಲಿಂ ಬದ್ಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್ ||"

---

ಗತನ ಪಾಪಕೃತ್ಯವನ್ನು ಅವರ ವಿರೋಧಿಗಳಿಗೆ ಅನ್ವಯಿಸುವ ನಿಯಮದಂತೆ, ಸಮುದ್ರರಾಜನ ವಿರೋಧಿಗಳಾದ ಮಹಾ ಪಾಪಿಷ್ಠ ರಾಕ್ಷಸರ ಮೇಲೆ, ಶ್ರೀರಾಮನು ಆ ಬಾಣವನ್ನು ಪ್ರಯೋಗಿಸಿದನು.

ಕಾಗೆಯ ಮೇಲೆ ಅಸ್ತ್ರಪ್ರಯೋಗ ಮಾಡಿದ ಸಂದರ್ಭದಲ್ಲಿ, ತನಗೆ ಯಾರೂ ರಕ್ಷಕರಿಲ್ಲದೆ ಶರಣಾಗತನಾದಾಗ, ಅವನಿಗೆ ಒಂದು ಕಣ್ಣು ಹೋಗುವಂತೆ ಶಿಕ್ಷಿಸಲಾಯಿತು. ಏಕೆಂದರೆ ಕಾಗೆಗೆ ತನ್ನ ದ್ವೇಷ ದಾಹ ಆರದೆ, ಇನ್ನು ಅಪರಾಧ ಮಾಡುವ ಸಂದರ್ಭದಲ್ಲಿ ಉಳಿದಿರುವ ಇನ್ನೊಂದು ಕಣ್ಣು ಹೋಗುವ ಭಯವುಂಟಾಗಿ, ಆ ದುರಭಿಸಂಧಿಯನ್ನು ಬಿಟ್ಟು ಸಂಚರಿಸಲು ಅನುಕೂಲವಾಗುವಂತೆ ಒಂದು ಕಣ್ಣನ್ನು ಮಾತ್ರ ಅಸ್ತ್ರಕ್ಕೆ ಲಕ್ಷ್ಯವಾಗುವಂತೆ ಶ್ರೀರಾಮನು ಮಾಡಿದನು.

ಮೇಲೆ ಕಂಡ ಮೂರು ವೃತ್ತಾಂತಗಳಿಂದ, ಪ್ರಯೋಗಿಸಿದ ಅಸ್ತ್ರವು ವ್ಯರ್ಥವಾಗದೆ ಇರಲು ಅದಕ್ಕೆ ಒಂದು ಲಕ್ಷ್ಯವನ್ನು ಕಾಣಿಸಿದುದೂ ಕೂಡ ಆಶ್ರಿತರ ಹಿತಕ್ಕಾಗಿಯೇ ಎಂದು ನಿಶ್ಚಯವಾಯಿತು.

ಎನ್ರು ಅವ್ವವಸರತ್ತಿಲೇ ಅಪರಾಧನೋ ಪತ್ತಾತಾಕ ಶರಣಾಗತರಾಯ್ ಪ್ರಸಾದಿಪ್ಪಿಕ್ಕ ಪ್ರಾಪ್ತವೆನ್ರು ಮಹಾರಾಜರುಕ್ಕು ಧರ್ಮೋಪದೇಶಂ ಶೊಲ್ಲುಂ ಕ್ರಮತ್ತಿಲೇ ಹಿತಂ ಶೊಲ್ಲ ಮಹಾರಾಜರುಂ ತೆಳಿನ್ದು

"ಯದಿ ಕಿಂಚಿದತಿಕ್ರಾಂತಂ ವಿಶ್ವಾಸಾತ್ಪ್ರಣಯೇನ ವಾ ।
ಪ್ರೇಷ್ಯಸ್ಯ ಕ್ಷಮಿತವ್ಯಂ ಮೇ ನ ಕಶ್ಚಿನ್ನಾಪರಾಧ್ಯತಿ ॥

ಎನ್ರುಕ್ಷಮೈಕೊಂಡಪ್ರಕಾರತ್ತೈಶೊಲ್ಲುಕೈಯಾಲೇ, ಭಗವದ್ವಿಷಯತ್ತಿಲೇ ಸಾಪರಾಧರಾನಾಲುಂ, ಭಾಗವತರ್ಕೈ ಕ್ಷಮೈಕೊಳ್ಳ, ಅವರ್ಮುಖತ್ತಾಲೇ ಪೆರುಮಾಳ್ ಕ್ಷಮಿಸ್ತರುಳುಕೈಯಾಲೇ ಇವನುಂ ನಿರಪರಾಧನಾಯ್ ಕೈಂಕರ್ಯಯೋಗ್ಯನಾಮೆನ್ನುಮಿಡತ್ತೈ ವೆಳಿಯಿಟ್ಟರುಳಿನಾರ್.

ಅವ್ವಳವಿಲ್,

"ಯಚ್ಚ ಶೋಕಾಭಿಭೂತಸ್ಯ ಶ್ರುತ್ವಾ ರಾಮಸ್ಯ, ಭಾಷಿತಂ ।
ಮಯಾ ತ್ವಂ ಪರುಷಾಣ್ಯುಕ್ತ ಸ್ತಚ್ಚ ತ್ವಂ ಕ್ಷಂತುಮರ್ಹಸಿ ॥

---

ಸುಗ್ರೀವ ಮಹಾರಾಜನು, ಶ್ರೀರಾಮನ ಕಾರ್ಯವನ್ನು ಸಕಾಲದಲ್ಲಿ ನೆರವೇರಿಸದೆ, ಭೋಗಾಸಕ್ತನಾಗಿ, ತಾನು ಮಾಡಿದ ಪ್ರತಿಜ್ಞೆಯನ್ನು ಮರೆತು ಕೃತಘ್ನನೆಂಬ ಹೆಸರು ಪಡೆದಾಗ, ಶ್ರೀರಾಮನಿಂದ ಪ್ರೇರಿತನಾದ ಲಕ್ಷ್ಮಣನು ಸುಗ್ರೀವನ ವಿಷಯದಲ್ಲಿ ತುಂಬ ಕೋಪಾಸಕ್ತನಾಗುವನು. ಇದನ್ನು ಕಂಡು ಸನ್ಮಂತ್ರಿಯಾದ ಆಂಜನೇಯನು ತಾನು ಮಾಡಿದ ಅಪ ರಾಧವು ಹೋಗುವಂತೆ ಲಕ್ಷ್ಮಣನನ್ನು ಶರಣುಹೊಕ್ಕು ಅವನ ಅನುಗ್ರಹ ಪಡೆಯಬೇಕೆಂದು ಧರ್ಮೋಪದೇಶ ಮಾಡಿದನು. ಹೀಗೆ ಮಾಡುವುದು ತನ್ನ ಹಿತಕ್ಕಾಗಿಯೇ ಎಂದು ತಿಳಿದು ಸುಗ್ರೀವನು ಲಕ್ಷಣನ ಕ್ಷಮೆಯನ್ನು ಯಾಚಿಸುವನು. ಭಗವಂತನ ವಿಷಯದಲ್ಲಿ ಅಪರಾಧ ಮಾಡಿದರೂ, ಅವನ ಭಕ್ತರಲ್ಲಿ ಶರಣಾಗತಿಮಾಡಿದರೆ ಭಗವಂತನು ಕ್ಷಮಿಸುವನು. ಇಂತಹವನು ನಿರಪರಾಧ ಭಗವತ್ಕೈಂಕರ್ಯಕ್ಕೆ ಅರ್ಹನಾಗುವನೆಂದು ಶಿಪಾರಸು ಮಾಡಿದ ಅಂಶವನ್ನು ಇಲ್ಲಿ ಪ್ರಕಾಶಪಡಿಸಲಾಗಿದೆ.

ಇದೇ ಸಂದರ್ಭದಲ್ಲಿ ತಾನು ಹೇಳಿದ ಪರುಷೋಕ್ತಿಗಳಿಗೆ ಶೋಕಾಭಿ ತಪ್ತನಾದ ಶ್ರೀರಾಮಚಂದ್ರನ ಕೋಪವೇ ಕಾರಣವೆಂದೂ, ತಾನು ಹಾಗೆ

ಎನ್ರಿಳೈಯಪೆರುಮಾಳ್ ತನ್ನುಡೈಯ ಪಾರುಷ್ಯವಾಕ್ಯಂಗಳುಕ್ಕಡಿ ಶೋಕ ಪರವಶರಾನ ಪೆರುಮಾಳುಡೈಯ ಶೀತ್ರತ್ತೈವಿಲ್ಲಿರಂದ ಪಾಶು ರಂಗಳೆನ್ರು, ತನ್ನುಡೈಯ ಅಪರಾಧತ್ತೈ ಸೋಪಾಧಿಕಮಾಕ್ಕಿ

"ನ ಚ ಸಂಕುಚಿತಃ ಪಂಥಾಃ ಯೇನ ವಾಲೀ ಹತೋ ಗತಃ" ಎನ್ರಾ ಪೋರ್ಲೇ ಮೇಲೆಳುಚ್ಚಿಯಾನ ಪೆರುಮಾಳುಡೈಯ ಪಾಶುರಂಗಳುಕ್ಕು ಕ್ಕಾರಣಂ,ಕಾರ್ಯ ಶೆಯ್ದಾರ್,ಮನ್ನು ಶೆಯ್ದಾನೆನ್ಗಿರ ಕಣಕ್ಕಿಲೇ ಶೋಕಮೇ ಯಾಯಿತ್ತು. "ಸಮಯೋ ತೀಕ್ಷ್ಣಸುಗ್ರೀವ" ಏರ್ಗೈಯಾಲೇ ಪೆರುಮಾಳರುಳಿ ಚ್ಚೆಯ್ದ ಪಾಶುರಂಗಳುಕ್ಕುಂ ಇಪ್ಪಡಿ ತಾತ್ಪರ್ಯಮೆನ್ರುಕಾಟ್ಟಿ, ಅಪ್ಪಡಿಯೇ ಸೋಪಾಧಿಕಮಾನ ತಂಗಳಪರಾಧಂಗಳುಕ್ಕು ಮಹಾರಾಜರೈ ಕ್ಷಮೈ ಕೊಳ್ಳುಂಡಾರೆನ್ಗೈಯಾಲೇ ಸಾಪರಾಧರಾನ ಶ್ರೀ ವೈಷ್ಣವರ್‌ಕಳ್ ಪುರಿಂದು ಅನುತಾಪತ್ತಾಲೇ ಕೃತಪ್ರಾಯಶ್ಚಿತ್ತರಾನಾಲ್. ಇವರ್ಕಳ್ ವಿಷಯತ್ತಿಲ ಪರಾಧ ದಶೈಯಿಲ್ ಪಣ್ಣಿನ ಅನಾದರಾದಿಕಳುಕ್ಕುತಾಂಗಳೆತಿರೇ ಕ್ಷಮೈ ಕೊಳ್ಳವೇಂಡು ಮೆನ್ನುಂ ಶಾಸ್ತ್ರಾರ್ಥತ್ತೈ ಕಾಟ್ಟಿನಾರ್.

---

ಮಾಡಿದ ಅಪರಾಧವು ಆ ನಿಮಿತ್ತವಾಗಿ ಬಂದದ್ದೆಂದೂ, ಹೀಗೆ ತಾನು ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದೂ ಲಕ್ಷ್ಮಣನು ಸುಗ್ರೀವನ ಕ್ಷಮೆಯನ್ನು ಯಾಚಿಸಿದನು. ಇದರಿಂದ, ಅಪರಾಧಿಗಳಾದ ಭಕ್ತರು ಅನುತಾಪಪಟ್ಟು ಪ್ರಾಯಶ್ಚಿತ್ತಾದಿಗಳನ್ನು ನಡೆಸಿದರೆ, ಅಂತಹ ಅಪರಾಧ ಸಮಯದಲ್ಲಿ ಮಾಡಿದ ಅನಾದರಗಳಿಗೆ ಕ್ಷಮೆ ಬೇಡಬೇಕೆಂಬ ಶಾಸ್ತ್ರಾರ್ಥ ವನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಹೀಗೆ ವಿಭೀಷಣ ವೃತ್ತಾಂತಕ್ಕೆ ಮೊದಲು ಶರಣಾಗತಿ ಧರ್ಮ ವಿಷಯದಲ್ಲಿ ಸರ್ವೋತ್ತಮ ವಿಷಯವನ್ನು ಶ್ರೀಮದ್ರಾಮಾಯಣವು ನಿರೂಪಿಸುತ್ತದೆ.

ಅನಂತರ ವಿಭೀಷಣ ಶರಣಾಗತಿ ಆದಮೇಲೆ 'ಸಮುದ್ರಂ ರಾಘವೋ ರಾಜಾ ಶರಣಂ ಗಂತುಮರ್ಹತಿ' ಎಂದು ವಿಭೀಷಣನು ಹೇಳುತ್ತಾನೆ. ಈ ಮಾತಿನ ಅರ್ಥವೇನೆಂದರೆ ತಾನು ಶ್ರೀರಾಮನಲ್ಲಿ ಮಾಡಿದ ಶರಣಾಗತಿ ಫಲಿಸಿತೆಂದು ತಿಳಿದು, ಪರಮಧಾರ್ಮಿಕನಾದ ವಿಭೀಷಣನು ಸೂಚಿಸಿರುವ

ಇಪ್ಪಡಿ ವಿಭೀಷಣ ವೃತ್ತಾಂತತ್ತುಕ್ಕು ಮುನ್ಬು ಶರಣಾಗತಿ ಧರ್ಮ ತ್ತಿಲಿಪ್ರಬಂಧಂ ನಿನ್ನನಿಲ್ಲೈ ಶೆನ್ನೋಂ ಇವ್ವಿಭೀಷಣ ವೃತ್ತಾಂತತ್ತುಕ್ಕು ಪಿನ್ಬು

"ಸಮುದ್ರಂ ರಾಘವೋ ರಾಜಾ ಶರಣಂಗಂತು ಮರ್ಹತಿ |"

ಎನ್ರು ತನಕ್ಕು ಶರಣಾಗತಿ ಫಲ್ಲಿಕ್ಕ ಕ್ಕಂಡ ಪರಮಧಾರ್ಮಿಕನುಡೈಯ ವಾಕ್ಯತ್ತಾಲೇ ಅಶಕ್ತನುಕ್ಕು ಅಭಿಮತ ಸಿದ್ಧಿಕ್ಕು ಶಕ್ತನೈ ಆಶ್ರಯಿಕ್ಕ ಪ್ರಾಪ್ತಮೆನ್ನುಮಿಡಂ ಶೊನ್ನಾರ್. ಅವ್ವಿಡತ್ತಿಲ್

"ಚಾಪಮಾನಯ ಸೌಮಿತ್ರೇ ಶರಾಂಶ್ಚಾಶೀವಿಷೋಪಮಾನ್ |
ಸಾಗರಂ ಶೋಷಯಿಷ್ಯಾಮಿ ಪದ್ಭ್ಯಾಂ ಯಾಂತು ಪ್ಲವಂಗಮಾಃ||"

ಎನ್ರು ಅರುಳಿಚ್ಚೆಯ್ಯಕ್ಕಡವಪ್ಪೆರುಮಾಳ್ ಕೈಯ್ಯಂಬುಮಾಂಡವರಲ್ಲಾ ಮೈಯಾಲುಂ ಶರಣಮಾಕವರಿಕ್ಕಪಟ್ಟ ಜಲಾಶಯಮುಲ್ಪಮತಿಯು ಮಾಯ್ ಅಲ್ಪಶಕ್ತಿಯಾಕೈಯಾಲುಂ ಶರಣಾಗತಿ ಫಲಿಯಾತೊಳಿಂದ ದತ್ತನೈ

---

ಪ್ರಕಾರ ಅಶಕ್ತನು ಶಕ್ತನನ್ನು ಆಶ್ರಯಿಸಿ ತನ್ನ ಕಾರ್ಯಸಾಧನೆ ಮಾಡಿ ಕೊಳ್ಳಬೇಕೆಂಬ ಅಂಶ ವ್ಯಕ್ತವಾಯಿತು. ಆದರೆ ಶ್ರೀರಾಮನು ಸಮುದ್ರ ರಾಜನಲ್ಲಿ ಮಾಡಿದ ಶರಣಾಗತಿಯು ಏಕೆ ಫಲಿಸಲಿಲ್ಲ ಎಂದರೆ, ಸಮುದ್ರ ರಾಜನು ಅಲ್ಪ ಮತಿಯಾಗಿಯೂ, ಅಲ್ಪಶಕ್ತಿಯುಳ್ಳವನಾಗಿಯೂ ಇದ್ದು ದರಿಂದಲೂ, ಶ್ರೀರಾಮನು ಮೊದಲು ಧನುರ್ಧಾರಿಯಾಗಿಲ್ಲದಿದ್ದುದ ರಿಂದಲೂ ಸಮುದ್ರ ರಾಜನಿಗೆ ಶರಣಾಗತಿಧರ್ಮ ತಿಳಿಯದೇ ಇದ್ದುದ ರಿಂದಲೂ ಹೀಗಾಯಿತು. ಆಗ ಶ್ರೀರಾಮನಿಗೆ ಕೋಪ ಬಂದು 'ಚಾಪ ಮಾನಯ ಸೌಮಿತ್ರೆ' ಎಂದು ಹೇಳಿದನು. ಯಾವಾಗ ಶ್ರೀರಾಮನು ತನ್ನ ಶಕ್ತಿಯನ್ನು ವ್ಯಕ್ತಪಡಿಸಿದನೋ ತತ್‌ಕ್ಷಣ ಸಮುದ್ರ ರಾಜನು ಪ್ರತ್ಯಕ್ಷ ನಾದನು. ಆದುದರಿಂದಲೇ ಅಲ್ಪಶಕ್ತಿಯುಳ್ಳ ಸಮುದ್ರರಾಜನಲ್ಲಿ ಶ್ರೀ ರಾಮನು ಮಾಡಿದ ಶರಣಾಗತಿಯು ಫಲಿಸಲಿಲ್ಲ ಎಂದು ತಿಳಿಯಬೇಕು.

ಹೀಗೆಯೇ ಶತ್ರುಗಳಲ್ಲಿಯೂ ವಾತ್ಸಲ್ಯವನ್ನು ತೋರಿಸುವ ಸ್ವಭಾವ ವುಳ್ಳ ಶ್ರೀರಾಮಚಂದ್ರನು ರಾವಣನನ್ನು ಉದ್ದೇಶಿಸಿ 'ಅರಾಕ್ಷಸ

ಪಿನ್ಬುರಾವರ್ಣ ತನ್ನೈಕ್ಕುರಿತ್ತು ರಿಪೂಣಾಮಪಿ ವತ್ಸಲರಾನ ಪೆರುಮಾಳ್,

"ಅರಾಕ್ಷಸಮಿಮಂ ಲೋಕಂ ಕರ್ತಾಸ್ಮಿ ನಿಶಿತೈಶ್ಶರೈಃ ।
ನ ಚೇತ್ ಶರಣಮಭ್ಯೇಷಿ ಮಾಮುಪಾದಾಯ ಮೈಥಿಲೀಂ ॥"

ಎನ್ರುರುಳಿಚ್ಚೆಯ್ದ ಪಾಶುರತ್ತಾಲೇ ಪೆರುಮಾಳುಡೈಯ ಶರಣ್ಯತ್ತೈಕುರುಪ್ಪಾನ ಸರ್ವಶಕ್ತಿತ್ವತ್ತೈಯುಂ ಪರಮ ಕಾರುಣಿಕತ್ವತ್ತೈಯುಂ ಹಿತ ಪ್ರವರ್ತಕತ್ವತ್ತೈಯುಂ, ಪ್ರಕಾಶಿಪ್ಪಿತ್ತಾರ್

"ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ ।

ಎನ್ಗಿರಪಡಿಯೇ ಶರಣಾಗತ ರಕ್ಷಣ ಧರ್ಮತ್ತಿಲುಂ ಸಹಧರ್ಮಚಾರಿಣಿಯಾನ ಪಿರಾಟ್ಟಿಯುಂ

"ಮಿತ್ರಮೌಪಯಿಕಂ ಕರ್ತುಂ ರಾಮಸ್ಥಾನಂ ಪರೀಪ್ಸತಾ ।
ವಧಂ ಚಾನಿಚ್ಛತಾ ಘೋರಂ ತ್ವಯಾಸೌ ಪುರುಷರ್ಷಭಃ ॥
ವಿದಿತಸ್ಸ ಹಿ ಧರ್ಮಜ್ಞಃ ಶರಣಾಗತವತ್ಸಲಃ ।
ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ ॥
ಪ್ರಸಾದಯಸ್ವ ತಂ ಚೈನಂ ಶರಣಾಗತವತ್ಸಲಂ ।
ಮಾಂ ಚಾಸ್ಮೈ ಪ್ರಯತೋ ಭೂತ್ವಾ ನಿರ್ಯಾತಯಿತುಮರ್ಹಸಿ ॥"

---

ಮಿಮಂ ಲೋಕಂ ಕರ್ತಾಸ್ಮಿ ನಿಶಿತೈ ಶರೈಃ । ನ ಚೇಚ್ಛರಣಮಭ್ಯೇಷಿ ಮಾಮುಪಾದಾಯ ಮೈಥಿಲೀಂ' ಎಂದು ಅಪ್ಪಣೆ ಕೊಡಿಸಿದ ವಾಕ್ಯದಿಂದ, ಪರಮಾತ್ಮನ ಶರಣ್ಯತೆಗೆ ಗುರುತಾದ ಸರ್ವಶಕ್ತಿತ್ವವನ್ನೂ, ಪರಮಕಾರುಣಿಕತ್ವವನ್ನೂ, ಹಿತಪ್ರವರ್ತಕತ್ವವನ್ನೂ ಪ್ರಕಾಶಪಡಿಸಲಾಯಿತು.

ಶರಣಾಗತ ಧರ್ಮ ರಕ್ಷಣದಲ್ಲಿ, ಸಹಧರ್ಮಚಾರಿಣಿಯಾಗಿರುವ ಸೀತಾದೇವಿಯು, ಅತಿಪ್ರತಿಕೂಲನೂ ಅಪರಾಧಿಯೂ ಆಗಿರುವ ರಾವಣನ ವಿಷಯದಲ್ಲಿ ಮಾತೃವಾತ್ಸಲ್ಯವನ್ನು ವ್ಯಕ್ತಪಡಿಸಿರುವುದರಿಂದ, ಈ ದಿವ್ಯ ದಂಪತಿಗಳು ಲೋಕ ಹಿತಾಚರಣೆಯಲ್ಲಿ ಸಮಾನಾಭಿಪ್ರಾಯವುಳ್ಳವರೆಂಬುದನ್ನು ತೋರಿಸಿದಂತಾಗಿದೆ. ಹೀಗೆಯೇ 'ತೇನ ಮೈತ್ರೀ ಭವತು ತೇ'

ಎನ್ರು ರಾವಣರ್ಗ ಪ್ರತಿಕೂಲನಾಯಿರುಕ್ಕಚ್ಚೆಯ್‌ದೇಯುಂ ಮಾತೃತ್ವ ಪ್ರಯುಕ್ತಮಾನ ವಾತ್ಸಲ್ಯಾತಿಶಯತ್ತಾಲೇ "ಅಸ್ತುತೇ" ಎನ್ನುಂ ಪ್ರಕಾರ ತ್ತಿಲೇ ಅರುಳಿಚ್ಚೆಯ್ದ ವಾಕ್ಯತ್ತಾಲೇ ಇದ್ದಂಪತಿಗಳ್ ಲೋಕಹಿತತ್ತಿಲೇ ಸಮಾನಾಭಿಪ್ರಾಯರೆನ್ನುಮಿಡತ್ತೈಕ್ಕಾಟ್ಟಿನಾರ್. ಇಪ್ಪಡಿ "ತೇನ ಮೈತ್ರೀ ಭವತು ತೇ" ಎನ್ರತುವುಂ ರಾವಣನುಕ್ಕು ಶಿಶುಪಾಲನಾನ ಜನ್ಮಾಂತರ ತ್ತಿಲೇ ಅಂತಿಮಕ್ಷಣತ್ತಿಲೇಯಾಗಿಲುಂ ಕಾರ್ಯಕರಮಾಯಿತ್ತು.

ಶರಣ್ಯ ಸಹಧರ್ಮಚಾರಿಣಿಯಾನ ಪಿರಾಟ್ಟಿವಿಷಯತ್ತಿಲೇ ತರ್ಜನ ಭರ್ತ್ಸನಾದಿ ಪ್ರವೃತ್ತೈಕ್ಕಳಾನ ರಾಕ್ಷಸಿಗಳೈ ಕ್ಕುರಿತ್ತು,

"ತದಲಂ ಕ್ರೂರವಾಕ್ಯೈರ್ವಃ ಸಾಂತ್ವಮೇವಾಭಿಧೀಯತಾಂ |
ಅಭಿಯಾಚಾಮ ವೈದೇಹೀಮೇತದ್ಧಿ ಮಮ ರೋಚತೇ |
ಭರ್ತ್ಸಿತಾಮಪಿ ಯಾಚಧ್ವಂ ರಾಕ್ಷಸ್ಯಃ ಕಿಂ ವಿವಕ್ಷಯಾ |
ರಾಘವಾದ್ಧಿ ಭಯಂ ಘೋರಂ ರಾಕ್ಷಸಾನಾಮುಪಸ್ಥಿತಂ |

---

ಎಂಬ ಮಾತೂ ಕೂಡ ರಾವಣನಿಗೆ ಅವನ ಮುಂದಿನ ಶಿಶುಪಾಲ ಜನ್ಮದ ಕೊನೆಯ ಘಳಿಗೆಯಲ್ಲಿ ಉಂಟಾದ ಪರಮಾತ್ಮ ಸ್ಮರಣದಿಂದ ಕಾರ್ಯಕಾರಿ ಯಾಯಿತು ಎಂದು ಹೇಳಬಹುದು.

ಶರಣ್ಯ ಸಹಧರ್ಮಚಾರಿಣಿಯಾದ ಸೀತಾದೇವಿಯನ್ನು ಹೆದರಿಸುವುದು, ನಿಂದಿಸುವುದು, ಇತ್ಯಾದಿ ವ್ಯಾಪಾರದಲ್ಲಿ ಉದ್ಯುಕ್ತರಾದ ರಾಕ್ಷಸಿಯರನ್ನು ಕುರಿತು ತ್ರಿಜಟೆಯು 'ಎಲೌ' ರಾಕ್ಷಸಿಯರುಗಳಿರಾ ಸೀತಾದೇವಿಯ ವಿಷಯದಲ್ಲಿ ನೀವು ಈ ರೀತಿಯಾಗಿ ಕ್ರೂರವಾದ ನಿಷ್ಠುರೋಕ್ತಿಗಳನ್ನು ಹೇಳಬೇಡಿ. ಇಲ್ಲಿಯವರಿಗೂ ಹೇಳಿದ್ದೇ ಸಾಕು. ಸಮಾಧಾನವಹಿಸಿ ಒಳ್ಳೆಯ ಮಾತುಗಳನ್ನೇ ಹೇಳಿ. ಸೀತಾದೇವಿಯನ್ನೇ ನಾವು ಪ್ರಾರ್ಥಿ ಸೋಣ. ಇದು ನನಗೆ ಸಮ್ಮತ. ನೀವು ನಿಂದಿಸಿದರೂ, ಅವಳನ್ನೇ ಶರಣು ಹೊಂದಿರಿ, ಶ್ರೀರಾಮನಿಂದ ರಾಕ್ಷಸರೆಲ್ಲರಿಗೂ ಮಹಾಭಯವುಂಟಾಗಿರು ವುದು. ಜನಕಪುತ್ರಿಯಾದ ಸೀತಾದೇವಿಯು ನಾವು ಮಾಡುವ ನಮಸ್ಕಾ ರಕ್ಕೆ ಒಲಿದು ಅನುಗ್ರಹಿಸುವಳು. ಎಲೌ ! ರಾಕ್ಷಸಿಯರೇ ! ಸಮಸ್ತಭಯ ದಿಂದ ನಮ್ಮನ್ನು ಕಾಪಾಡತಕ್ಕವಳು ಸೀತೆಯೊಬ್ಬಳೇ!' ಎಂದು ಹೇಳಿದಳು.

ಪ್ರಣಿಪಾತಪ್ರಸನ್ನಾ ಹಿ ಮೈಥಿಲೀ ಜನಕಾತ್ಮಜಾ ||
ಅಲಮೇಷಾ ಪರಿತ್ರಾತುಂ ರಾಕ್ಷಸ್ಯೋ ಮಹತೋ ಭಯಾತ್ |”

ಎನ್ರು ತ್ರಿಜಟೆಯುಂ ಸ್ವಮತಂ ಶೊನ್ನಪಡಿಯೈಪ್ಪೇಶಿನಾರ್ ಪಿರಾಟ್ಟಿಯುಂ ಅವರ್ಗಳಿಶೈವಿನ್ರಿಕ್ಕೇಯಿರುಕ್ಕ ಸತ್ವಪ್ರಕೃತಿಯಾನ ತ್ರಿಜಟೈಯೋಡು ಅವರ್ಗಳುಕ್ಕುಂಡಾನ ತುಪಕ್ಕಾಲೇ ವಾತ್ಸಲ್ಯ ಪರವಶೈಯಾಯರುಳಿಚ್ಚೆಯ್ದ ವಾರ್ತೆಯೈ ಶ್ರೀವಾನರ ವೀರರ್ಗಳುಕ್ಕು ಅನುಭಾಷಿತ್ತು ಕಾಟ್ಟಿಕ್ಕಿರ ತಿರುವಡಿ,

“ಅಲಮೇಷಾ ಪರಿತ್ರಾತುಂ ರಾಘವಾದ್ರಾಕ್ಷಸೀಗಣಂ |”

ಎನ್ರು ತ್ರಿಜಟಾವಾಕ್ಯತ್ತೈ ಮುಡಿತ್ತು

“ತತಸ್ಸಾ ಹ್ರೀಮತೀ ಬಾಲಾ ಭರ್ತುರ್ವಿಜಯಹರ್ಷಿತಾ |
ಅವೋಚದ್ಯದಿ ತತ್ತಥ್ಯಂ ಭವೇಯಂ ಶರಣಂ ಹಿ ವಃ ||”

---

ರಾಕ್ಷಸಿಗಳು ಈ ರೀತಿ ವರ್ತಿಸುತ್ತಿರುವಾಗಲೇ ಸೀತಾದೇವಿಯು ಸಾತ್ವಿಕ ಸ್ವಭಾವವುಳ್ಳ ತ್ರಿಜಟೆಯನ್ನು ಕುರಿತು ಹೇಳಿದ ಮಾತುಗಳನ್ನೇ ಆಂಜನೇಯನು ವಾನರ ವೀರರುಗಳಿಗೆ ಅನುವಾದ ಮಾಡಿ ಹೇಳಿದನು. ಆ ಮೇಲೆ ರಾವಣವಧಾನಂತರ ತನ್ನ ಪತಿಯಾದ ರಾಮಚಂದ್ರನು ವಿಜಯಶಾಲಿಯಾದದ್ದನ್ನು ಕೇಳಿ ಸಂತೋಷಪಟ್ಟ ಸೀತಾದೇವಿಯು ಲಜ್ಜೆಯಿಂದ ಎಲೌ ! ರಾಕ್ಷಸಿಯರೇ ! ನಿಮಗೆ ನಾನು ರಕ್ಷಕಳಾಗಿರುವೆನು. ಹೆದರಬೇಡಿ, ಎಂದು ಹೇಳಿದ ಸೀತಾದೇವಿಯ ರಕ್ಷಾಭರ ಸ್ವೀಕಾರ ವಾಕ್ಯವನ್ನೂ ವಾನರ ವೀರರುಗಳಿಗೆ ಆಂಜನೇಯನು ತಿಳಿಸಿದನು

ಹೀಗೆ ಅಪರಾಧ ಮಾಡಿದ ರಾಕ್ಷಸಿಯರನ್ನು ತಾನು ಶಿಕ್ಷಿಸಬೇಕೆಂದು ರಾಮದೂತನಾದ ಆಂಜನೇಯನು ತನ್ನ ಕೋಪೋದ್ದೇಶವನ್ನು ಸೀತಾದೇವಿಗೆ ತಿಳಿಸಲು ಆಗ ಸೀತಾದೇವಿಯು 'ಎಲೈ ! ವಾನರ ವೀರನೇ ! ಜಗತ್ತಿನಲ್ಲಿ ಪಾಪ ಮಾಡಿದವರಿಗೂ ಒಳ್ಳೆಯದನ್ನು ಮಾಡಿದವರಿಗೂ, ವಧಕ್ಕೆ ಅರ್ಹರಾದವರಿಗೂ, ವಿವೇಕಿಯಾದ ನೀನು ದಯೆಯನ್ನು ತೋರಿಸಬೇಕು, ಸಾಮಾನ್ಯವಾಗಿ ಪ್ರಪಂಚದಲ್ಲಿ ಯಾರುತಾನೆ ತಪ್ಪುಮಾಡದೆ ಇರುವುದಿಲ್ಲ' ಎಂದು ಆಂಜನೇಯನಿಗೆ ಉಂಟಾಗಿದ್ದ ಕೋಪೋದ್ರೇಕವನ್ನು

ಎನ್ರುಪಿರಾಟ್ಟಿಯರುಳಿ ಚ್ಚೆಯ್ದ ರಕ್ಷಾಭರ ಸ್ವೀಕಾರ ವಾಕ್ಯತ್ತೈ ಅನುವದಿತ್ತುಕ್ಕಾಟ್ಟಿನಾರ್.

ಪಿನ್ಬು ಸಾಪರಾಧೈಕಳಾನ ರಾಕ್ಷಸಿಗಳೈಪ್ಪತ್ತ ರಾಮದೂರ್ತ ಶೀರಿನ ವಿಡತ್ತು.

“ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ |
ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ ||”

ಇತ್ಯಾದಿಕಳಾಲೇ ಯರ್ವ ಶೀತತ್ತೈಯಾತ್ತಿ ಪ್ಪಿರಾಟ್ಟಿ ರಾಕ್ಷಸಿಗಳೈ ತಾನೇರಿಟ್ಟುಕ್ಕೊಂಡು ರಕ್ಷಿತ್ತಪ್ಪಡಿ ಶೊನ್ನಾರ್. ಇವ್ವೃತ್ತಾಂತತ್ತೈ ಅನುಸಂಧಿತ್ತ ಭಟ್ಟರ್, ರಾಮಗೋಷ್ಠಿಕ್ಕು ಆಕಾತ ನಮಕ್ಕು ಪಿರಾಟ್ಟಿಯುಡೈಯಕ್ಷಮೈಯೊೞಿಯ ತಂಜಮಿಲ್ಲೈಯೆನ್ನು ವಿಡತ್ತೈ

“ಮಾತರ್ಮೈಥಿಲಿ ರಾಕ್ಷಸೀಸ್ತ್ವಯಿ ತಥೈವಾರ್ದ್ರಾಪರಾ-
ಧಾಸ್ತ್ವಯಾ |
ರಕ್ಷಂತ್ಯಾ ಪವನಾತ್ಮಜಾಲ್ಲಘುತರಾ ರಾಮಸ್ಯ ಗೋಷ್ಠೀ ಕೃತಾ ||
ಕಾಕಂ ತಂ ಚ ವಿಭೀಷಣಂ ಶರಣಮಿತ್ಯುಕ್ತಿಕ್ಷಮೌ ರಕ್ಷತ |
ಸಾನಸ್ಸಾಂದ್ರ ಮಹಾಗಸಸ್ಸುಖಯತು ಕ್ಷಾಂತಿಸ್ತವಾಕಸ್ಮಿಕೀ ||”

---

ಸಮಾಧಾನಪಡಿಸಿ ರಾಕ್ಷಸಿಯರ ರಕ್ಷಣಾ ಭಾರವನ್ನು ತಾನೇ ವಹಿಸಿ ಕಾಪಾಡಿದುದಾಗಿ ತಿಳಿಸಲಾಗಿದೆ.

ಇದೇ ವಿಷಯವನ್ನು ಶ್ರಿ ಪರಾಶರಭಟ್ಟರು ತಮ್ಮ ಶ್ರೀಗುಣರತ್ನ ಕೋಶದಲ್ಲಿ, ಶ್ರೀರಾಮಗೋಷ್ಠಿಗೆ ಸೇರದ ತಮ್ಮಂತಹವರಿಗೆ ಮಹಾಲಕ್ಷ್ಮಿಯ ಕ್ಷಮೆ ವಿನಹ ಹಿತವಾದುದು ಯಾವುದೂ ಇಲ್ಲ ಎಂದಿದ್ದಾರೆ 'ಎಲೌ ! ತಾಯಿಯಾದ ಸೀತಾದೇವಿಯೇ ! ನಿನ್ನಲ್ಲಿ ಈಗತಾನೆ ಅಪರಾಧ ಮಾಡಿದ ರಾಕ್ಷಸಿಯರನ್ನು ಆಂಜನೇಯನಿಂದ ರಕ್ಷಿಸಿದೆ. ಇದರಿಂದ ಕಾಕಾಸುರನನ್ನೂ, ವಿಭೀಷಣನನ್ನೂ ಶರಣು ಎಂದು ಹೇಳಿದ ಮಾತ್ರದಿಂದಲೇ ರಕ್ಷಿಸಿದ ಶ್ರೀರಾಮಗೋಷ್ಠಿಯು ಬಹು ಲಘುವಾಗಿ ಮಾಡಲ್ಪಟ್ಟಿತು. ಆದ ಕಾರಣ ಪ್ರತಿಕ್ಷಣವೂ ನಿನ್ನಲ್ಲಿ ಅಪರಾಧಮಾಡುತ್ತಿರುವ ನಮ್ಮಗಳನ್ನು ಆಕಸ್ಮಿಕವಾಗಿ ನಿನ್ನ ಕ್ಷಮಾಗುಣವೇ ಕಾಪಾಡಲಿ' ಎಂದು ಹೇಳಿದರು.

ಎನ್ರುರುಳಿಚ್ಚೆಯ್ದಾರ್. ಇಪ್ಪಡಿ ಆರುಕಾಂಡತ್ತಿಲುಂ ಶರಣಾಗತಿ ಧರ್ಮನೇ ಅಂಜುರುವಾಣಿಯಾಯ್, ಕ್ಕೋಕ್ಕಪಟ್ಟದು.

ಉತ್ತರ ರಾಮಾಯಣತ್ತಿಲುಂ ರಾವಣರ್ಪಾಟ್ಟರ್ಮಾರ್ ಕಾಲತ್ತಿಲೇ ವಿಷ್ಣ್ವವತಾರಾವಸ್ಥನಾನ ಸರ್ವೇಶ್ವರರ್ ಶರಣಾಗತರಾನ ದೇವರ್ಗಳೈ ರಕ್ಷಿಪ್ಪ ದಾಕ ತಿರುವಳ್ಳಂಪತ್ತಿ ರಾಕ್ಷಸರೋಡೆ ಪೊರುತವಳವಿಲೇ ಪೂಸಲಿಲೇ ಕೇಟ್ಟುಪರಾಂಗ್ಮುಖರಾಯ್ ಲಂಕೆಯ್ಯೈಕ್ಕುರಿತ್ತು ಪಲಾಯನಂ ಪಣ್ಣುಕಿರ ರಾಕ್ಷಸರ್ರೈರ್ಪಿತುಡಂದುರ್, "ಶಾಂಗರ್ಮುದ್ಯೈತ್ತ" ಶರಮಳೈಕಳಾಲೇ ಕೊನ್ರು ಶೂರೈಯಾಡಕಂಡ ಮಾಲ್ಯವಾರ್ ಪುರಿಂದು

---

ಶ್ರೀಮದ್ರಾಮಾಯಣದ ಆರು ಕಾಂಡಗಳಲ್ಲಿಯೂ, ಶರಣಾಗತಿ ಧರ್ಮವು ಮಣಿಯ ಹಾರದಂತೆ ಪೋಣಿಸಲ್ಪಟ್ಟು ಬಹು ಚೆನ್ನಾಗಿ ನಿರೂಪಿತ ವಾಗಿದೆ. ಬಾಲಕಾಂಡದಲ್ಲಿ ದೇವತೆಗಳು ಪರಮಾತ್ಮನಲ್ಲಿ ಮಾಡಿದ ಶರಣಾ ಗತಿ. ಅಯೋಧ್ಯಾಕಾಂಡದಲ್ಲಿ ಭರತನು ಮಾಡಿದ ಶರಣಾಗತಿ, ಅರಣ್ಯ ಕಾಂಡದಲ್ಲಿ ದಂಡಕಾರಣ್ಯ ಋಷಿಗಳೂ, ಕಿಷ್ಕಿಂಧಾ ಕಾಂಡದಲ್ಲಿ ಸುಗ್ರೀವನೂ ಸುಂದರಕಾಂಡದಲ್ಲಿ ತ್ರಿಜಟಾದಿ ರಾಕ್ಷಸಿಯರೂ ಮಾಡಿದ ಶರಣಾಗತಿ, ಎಲ್ಲ ಕ್ಕಿಂತ ಮೇಲಾಗಿ ಯುದ್ಧಕಾಂಡದಲ್ಲಿ ವಿಭೀಷಣನು ಮಾಡಿದ ಶರಣಾಗತಿ ಬಹು ಪ್ರಸಿದ್ಧವಾಗಿದೆ.

ಉತ್ತರಕಾಂಡದಲ್ಲಿ ರಾವಣ ದಿಗ್ವಿಜಯ ಸಂದರ್ಭಕಾಲದಲ್ಲಿ ಶ್ರೀ ಮಹಾವಿಷ್ಣು ಅವತಾರ ತಾಳಿದ ಸರ್ವೇಶ್ವರನು ಶರಣಾಗತರಾದ ದೇವತೆ ಗಳನ್ನು ರಕ್ಷಿಸುವುದಾಗಿ ಸಂಕಲ್ಪಮಾಡಿ, ರಾಕ್ಷಸರೊಡನೆ ಯುದ್ಧಮಾಡುವ ಪ್ರಯತ್ನದಲ್ಲಿರುವಾಗ, ಇದನ್ನು ಕಂಡು ರಾಕ್ಷಸರು ಲಂಕೆಯ ಕಡೆ ಪಲಾ ಯನ ಮಾಡಿದರು. ಆಗ ಮಾಲ್ಯವಂತನು ಹೀಗೆ ಹೇಳುವನು 'ಎಲೈ ! ನಾರಾಯಣನೇ ! ನೀನು ಪುರಾತನವಾದ ಕ್ಷತ್ರಿಯ ಧರ್ಮವನ್ನು ತಿಳಿ ಯೆಯಾ! ಯುದ್ಧದಲ್ಲಿ ಮನಸ್ಸಿಲ್ಲದೆ ಭಯದಿಂದ ಓಡಿ ಹೋಗುವ ನಮ್ಮನ್ನು ಅನಭಿಜ್ಞರಾದ ಇತರ ಸಾಮಾನ್ಯರಂತೆ, ನೀನು ಕೊಲ್ಲಬಹುದೇ ? ಇದು ಕ್ಷತ್ರಿಯ ಧರ್ಮವಿರುದ್ಧವಲ್ಲವೇ? ಧರ್ಮವನ್ನು ಅರಿಯದೆ ಇತರರು ಮಾಡುವ

"ನಾರಾಯಣ ನ ಜಾಸೀಷೇ ಕ್ಷತ್ರಧರ್ಮಂ ಸನಾತನಂ |
ಅಯುದ್ಧಮನಸೋ ಭಗ್ನಾನಸ್ಮಾನ್ ಹಸಿ ಯಥೇತರಃ||"

ಎನ್ರು ಓಡಿಪ್ಪೋಕಿರಯೆಂಗಳ್ಳೈ ಕೊಲ್ಲುಹೈ ಕ್ಷತ್ರಧರ್ಮವಿರುದ್ಧಮನ್ರೋ ? ಧರ್ಮ ಮರಿಯಾತಾರ್ ಶೆಯ್ಯುಮತ್ತೈ ಧರ್ಮಜ್ಞನಾನ ನೀ ಶೆಯ್ಯಾನಿರ್ಕಿರ ತೆನ್ನನ್ರು ಆತ್ತಾಮೈಯಾಲೇ ಮೊರೈಯಿಡ ಸರ್ವೇಶ್ವರ ನಾಂ ಕ್ಷತ್ರಿಯ ರಾಕಿಲನ್ರೋ ಕ್ಷತ್ರಿಯ ಧರ್ಮಮನುಷ್ಠಿಪ್ಪದು. ನಮ್ಮೈ ನಾರಾಯಣನೆನ್ರು ನೀ ಶೊನ್ನಪಡಿಯೇ ನಾಂ ನಿಯಂತೃತ್ವಾದಿ ಕಳಾಲೇ ಸರ್ವ ವಿಲಕ್ಷಣ ರಾಕೈಯಾಲ್ ನಾರಾಯಣ ಧರ್ಮಮಾನ ಶರಣಾಗತ ರಕ್ಷಣ ಮನುಷ್ಠಿಕ್ಕಿರೋ ಮೆನ್ರು ಅಭಿಪ್ರಾಯಂ ಕೊಂಡು

"ಯುಷ್ಮತ್ತೋ ಭಯಭೀತಾನಾಂ ದೇವಾನಾಂ ವೈ ಮಯಾಭಯಂ|
ರಾಕ್ಷಸೋತ್ಸಾದನಂ ದತ್ತಂ ತದೇತದನುಪಾಲ್ಯತೇ ||
ಪ್ರಾಣೈರಪಿ ಪ್ರಿಯಂ ಕಾರ್ಯಂ ದೇವಾನಾಂ ಹಿ ಸದಾ ಮಯಾ |
ಸೋಹಂ ವೋ ನಿಹನಿಷ್ಯಾಮಿ ರಸಾತಲಗತಾನಪಿ ||"

---

ಕೆಲಸವನ್ನು ಧರ್ಮಜ್ಞನಾದ ನೀನು ಮಾಡಬಹುದೇ ? ಎಂದು ಒಂದೇ ಉಸುರಿಗೆ ಮೊರೆಯಿಡುವನು.

ಆಗ ಸರ್ವೇಶ್ವರನು ಅವನಿಗೆ ಹೀಗೆ ಉತ್ತರಕೊಡುವನು. 'ಹೇ ! ಮಾಲ್ಯವಂತಾ ! ನಾವು ಕ್ಷತ್ರಿಯರಾಗಿದ್ದರೆ ಕ್ಷತ್ರಿಯ ಧರ್ಮವನ್ನು ಆಚರಿಸುವುದು ಯುಕ್ತ. ನೀನು ನನ್ನನ್ನು 'ನಾರಾಯಣ !' ಎಂದು ಸಂಬೋಧಿಸಿದುದರಿಂದ ನಾರಾಯಣನಿಗೆ ಅಸಾಧಾರಣವಾದ ನಿಯಂತೃತ್ವದಿಂದಲೂ, ಸರ್ವವಿಲಕ್ಷಣತೆಯಿಂದಲೂ, ನಾರಾಯಣನ ಧರ್ಮವಾದ ಶರಣಾಗತ ರಕ್ಷಣವನ್ನೇ ನಾವು ಆಚರಿಸುವೆವು' ಎಂದು ಸೂಚಿಸಿದನು. ಅಲ್ಲದೆ 'ನಿಮ್ಮಿಂದ ಹೆದರಿರುವ ದೇವತೆಗಳಿಗೆ ಅವರ ವಿರೋಧಿಗಳಾದ ರಾಕ್ಷಸರನ್ನು ಸಂಹರಿಸುವುದಾಗಿ ನಾವು ಅಭಯಪ್ರಧಾನ ಮಾಡಿರುವೆವು. ಆದಕಾರಣ ಪ್ರಾಣದಾನ ಮಾಡಿಯಾದರೂ ದೇವತೆಗಳಿಗೆ ನಾವು ಪ್ರಿಯವನ್ನುಂಟುಮಾಡುವುದು ನಮ್ಮ ಧರ್ಮ. ನೀವು ಪಾತಾಳಕ್ಕೆ ಹೋದರೂ ನಿಮ್ಮನ್ನು ಬಿಡದೆ ಕೊಲ್ಲುವೆವು' ಎಂದನು.

